ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೦ ಜೂನ್ ೨೦೦೪ ಸಂಚಿಕೆ : ೬

## ಶ್ರೀಮಠದಲ್ಲಿ ವಿದ್ಯಾರ್ಥಿಗಳ ದಾಖಲಾತಿ : ಒಂದು ಅಪೂರ್ವ ನೋಟ





















ಮುಖಪುಟ
ಶ್ರೀಮಠದಲ್ಲಿ ವಿದ್ಯಾರ್ಥಿಗಳ
ದಾಖಲಾತಿ :
ಒಂದು ಅಪೂರ್ವ ನೋಟ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೦ ಜೂನ್ ೨೦೦೪ ಸಂಚಿಕೆ : ೬



ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೩೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ..........


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ವಚನಗಳ ವಿಶ್ಲೇಷಣೆ – ಸಂ. ಡಾ. ಎಲ್. ಬಸವರಾಜು
೬. ಬ್ರಹ್ಮ ಮತ್ತು ಸೃಷ್ಟಿ – ಕವಿತಾಕೃಷ್ಣ
೭. ವಚನ ಸಾಹಿತ್ಯದಲ್ಲಿ ಗುರುವಿನ ಸ್ವರೂಪ – ವಿಕ್ರಮ ವಿಸಾಜಿ
೧೦. ಆಸೆ-ದುರಾಸೆ – ಹುಲಿಕಲ್ ನಾಗರಾಜ್
೧೧. ಶ್ರೀ ಸಿದ್ಧೇಶ್ವರ ಪುರಾಣ – (ಭಾಗ – ೪) – ಕೋ.ರಂ. ಬಸವರಾಜು
೧೪. ನೀರು ಅಮೂಲ್ಯ ಪ್ರಾಕೃತಿಕ ಸಂಪತ್ತು – ರಾಧೆ
೧೭. ರಾಷ್ಟ್ರೀಯ ಭಾವೈಕ್ಯತೆಗಾಗಿ ಶಿಕ್ಷಣ – ಕೆ.ಎನ್. ರಾಜಶೇಖರಯ್ಯ
೧೯. ನಾವು ಸೇವಿಸುವ ಆಹಾರ ಹೇಗಿರಬೇಕು? – ಡಾ. ಎಂ.ಎಸ್. ರಾಜಣ್ಣ
೨೧. ಮಹಿಳೆ ಮತ್ತು ಸಾಕ್ಷರತೆ – ಬಾ.ಹ. ರಮಾಕುಮಾರಿ
೨೩. ಕ್ಷಣ – ಪ್ರೇಮಾಮಲ್ಲಣ್ಣ
೨೫. ಸಭೆ-ಸಮಾರಂಭ
೨೭. ಕ್ಷೇತ್ರವಾರ್ತೆ



ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೬೦೦/- |
| ಬಿಡಿ ಪ್ರತಿ | ರೂ. ೧೦.೦೦ |



## ಜನರ ಆಶೋತ್ತರಗಳಿಗೆ ಸ್ಪಂದಿಸುವ ಆಡಳಿತ ....

ಸನ್ಮಾನ್ಯ ಶ್ರೀ ಧರ್ಮಸಿಂಗ್ ಅವರು ರಾಜ್ಯದ ಮುಖ್ಯಮಂತ್ರಿಗಳಾಗಿ, ಸನ್ಮಾನ್ಯ ಶ್ರೀ ಸಿದ್ಧರಾಮಯ್ಯನವರು ಉಪಮುಖ್ಯಮಂತ್ರಿಗಳಾಗಿ, ಕಾಂಗ್ರೆಸ್ ಮತ್ತು ಜಾತ್ಯಾತೀತ ಜನತಾದಳದಿಂದ ಒಟ್ಟು ಹತ್ತು ಮಂದಿ ಗಣ್ಯರು ಪ್ರಮಾಣವಚನ ಸ್ವೀಕರಿಸಿದ್ದಾಗಿದೆ. ಈ ಸಂದರ್ಭದಲ್ಲಿ 'ಸಿದ್ಧಗಂಗಾ' ಎಲ್ಲ ಮಾನ್ಯರಿಗೆ ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.

ಆದರೆ, ಹಗ್ಗ-ಜಗ್ಗಾಟ ನಿಂತಿಲ್ಲ. ಖಾತೆಗಳ ಹಂಚಿಕೆಯ ಕಿತ್ತಾಟದ ಕಿರಿಕಿರಿ ಪಿರಿಪಿರಿಯನ್ನುಂಟು ಮಾಡಿದೆ. ಇಂಥದೇ ಖಾತೆ, ಇದೇ ಖಾತೆ ತನಗೇ ಬೇಕೆಂಬ ಹಟದ ನಾಟಕ ಪತ್ರಿಕೆಗಳಿಗೆ ಸಮೃದ್ಧ ಸುದ್ದಿಯನ್ನೊದಗಿಸುತ್ತಿರುವುದು ರಹಸ್ಯವಾಗೇನೂ ಉಳಿದಿಲ್ಲ. ಸಚಿವರೆಲ್ಲರೂ ಸಜ್ಜನರೇ, ಸದ್ಭಾವಿಗಳೇ, ಸೇವಾಕಾಂಕ್ಷಿಗಳೇ ಆಗಿರುವುದು ರಾಜ್ಯದ ಭಾಗ್ಯವಿಶೇಷ. ಅವರೆಲ್ಲರಲ್ಲಿ ಒಂದು ನಮ್ರ ಮನವಿ ಏನೆಂದರೆ ಸೇವೆ ಮಾಡುವುದಕ್ಕೆ ಖಾತೆ ಮುಖ್ಯವೆನಿಸಲಾರದು, ಮನಸ್ಸು, ಅರ್ಪಣಾಭಾವ, ರಾಜ್ಯದ ಸಮಸ್ಯೆಗಳ ಅರಿವು ಮುಖ್ಯವೆನಿಸುತ್ತದಲ್ಲವೆ? ಇದನ್ನು ತಿಳಿಯದವರೇನಲ್ಲ ನಮ್ಮ ಸಚಿವರುಗಳು. ಆದರೆ ಯಾವುದೋ ಮೋಹ, ಆಕರ್ಷಣೆ, ಆಢ್ಯತೆ ಅವರನ್ನು ಕಾಡಿಸುತ್ತಿರುವಂತಿದೆ. ಅದನ್ನು ಮೀರಿ ಎತ್ತರಕ್ಕೆ ಬೆಳೆಯುವ ಮನಸ್ಸು ಅವರದಾಗಬೇಕು. ರಾಜ್ಯದ ರೈತ ಆತ್ಮಹತ್ಯೆಯಿಂದ ಮುಕ್ತನಾಗುವಂತೆ, ವೃತ್ತಿಶಿಕ್ಷಣವನ್ನು ಶುಲ್ಕ ಭಯದಿಂದ ಮುಂದುವರಿಸಲಾರದ ವಿದ್ಯಾರ್ಥಿಗನುಕೂಲವಾಗುವಂತೆ, ಕುಡಿಯುವ ನೀರಿಗಾಗಿ ಐದಾರು ಕಿ.ಮೀ. ದೂರದಿಂದ ನೀರು ತರುತ್ತಿರುವ ಮಹಿಳೆಯರ ನಿಟ್ಟುಸಿರು ನಿಲ್ಲುವಂತೆ, ಕೂಲಿಗಾಗಿ ನೀಡಬೇಕಾಗಿದ್ದ ಅಕ್ಕಿ ಕಾಳಸಂತೆಯಲ್ಲಿ ಮಾರಾಟವಾಗದಂತೆ, ಅನುದಾನಿತ ಶಿಕ್ಷಣ ಸಂಸ್ಥೆಗಳಿಗೆ ನೀಡುತ್ತಿದ್ದ ಅನುದಾನದ ಹಣ ಕಡಿತವಾಗದಂತೆ, ದಲಿತರ ಮೇಲಿನ ದೌರ್ಜನ್ಯಗಳು ಇಲ್ಲವಾಗುವಂತೆ, ಆನ್‌ಲೈನ್ ಲಾಟರಿ ನಿಲ್ಲುವಂತೆ, ಶಾಲಾ ಕಾಲೇಜು ಮಕ್ಕಳಿಗೆ ಸಕಾಲದಲ್ಲಿ ಪಠ್ಯಪುಸ್ತಕಗಳು ಲಭ್ಯವಾಗುವಂತೆ, ಚುನಾವಣೆಗಳು ಭ್ರಷ್ಟಾಚಾರದಿಂದ ಮುಕ್ತವಾಗುವಂತೆ, ಕಾವೇರಿ ನದಿ ನೀರಿನ ಸಮಸ್ಯೆಗೆ ಶಾಶ್ವತ ಪರಿಹಾರ ಕಂಡುಕೊಳ್ಳುವಂತೆ, ಕನ್ನಡವೇ ಆಡಳಿತಭಾಷೆಯಾಗಿ ಸರ್ವತ್ರ ವ್ಯವಹರಿಸುವಂತೆ, ಆರೋಪ-ಪ್ರತ್ಯಾರೋಪಗಳಲ್ಲಿ ಕಾಲಕಳೆಯದಂತೆ, ಕಾರ್ಯಾಂಗದ ಮೇಲೆ ಸಂಪೂರ್ಣ ಪ್ರಭುತ್ವವನ್ನಿಟ್ಟುಕೊಂಡು ಕರ್ನಾಟಕದ ಜನತೆಯ ಆಶೋತ್ತರಗಳಿಗೆ ಆಶಾಕಿರಣಗಳಾಗಿ, ತಮ್ಮ ಪಾಲಿಗೆ ಬಂದ ಖಾತೆಯೇ ಪರಮ ಪವಿತ್ರ ಸೇವಾ ಕ್ಷೇತ್ರವೆಂದು ಪರಿಭಾವಿಸಿಕೊಂಡು ಸೇವಾ ಶಿವಪಥದಲ್ಲಿ ಮುನ್ನಡೆಯುತ್ತಾರೆಂಬ ವಿಶ್ವಾಸವನ್ನು 'ಸಿದ್ಧಗಂಗಾ' ವ್ಯಕ್ತಪಡಿಸಲಿಚ್ಛಿಸುತ್ತದೆ.

ರಾಜ್ಯದ ಹಿತರಕ್ಷಣೆಯ ಸಮಯದಲ್ಲಿ ಪಕ್ಷ-ಪರಪಕ್ಷಗಳೆನ್ನದಂತೆ ತಮಿಳುನಾಡಿನ ಆದರ್ಶವನ್ನು ರಾಜ್ಯಸರ್ಕಾರ ಹಾಗೂ ಶಾಸಕ ಬಂಧುಗಳು ಅನುಸರಿಸುವ ಹೊಸಸಂಪ್ರದಾಯವನ್ನು ಪ್ರಾರಂಭಿಸುತ್ತಾರೆಂದೂ ಆಶಾಭಾವನೆಯನ್ನು ಮುಂದುಮಾಡುತ್ತವೆ 'ಸಿದ್ಧಗಂಗಾ'.

— ಸಂಪಾದಕ







## ಧರ್ಮ

*ಪ್ರಾಪಂಚಿಕ ಜೀವನ ಉತ್ತಮಪಡಿಸುವುದೇ ಧರ್ಮದ ಉದ್ದೇಶ. ''ಇಲ್ಲಿ ಸಲ್ಲುವ'' ಜೀವನಕಲೆಯ ರಹಸ್ಯವನ್ನು ತಿಳಿಸುವುದೇ ಧರ್ಮ. ಧರ್ಮ ಸಂವರ್ಧಿಸಬೇಕಾದರೆ ಜೀವನ ಸೌಲಭ್ಯಗಳ ಪೂರೈಕೆಯಾಗಬೇಕು. ಮೂಲಭೂತ ಆವಶ್ಯಕತೆಗಳಾದ ಅನ್ನ, ಬಟ್ಟೆ, ವಸತಿಗಳ ವ್ಯವಸ್ಥೆಯಾಗಬೇಕು. ಹಸಿದ ಹೊಟ್ಟೆಗೆ ಭಗವದ್ಗೀತೆಯನ್ನು ಉಪದೇಶಿಸುವುದಲ್ಲ. ಪ್ರೀತಿ, ವಿಶ್ವಾಸಗಳನ್ನು ಧರ್ಮಬೋಧಿಸುತ್ತದೆಂದರೆ ಸಮಾಜವನ್ನು ಸ್ವಾವಲಂಬಿಯನ್ನಾಗಿ ಮಾಡಿದೆ ಎಂದರ್ಥ. ಅದು ಯಾವುದೇ ವಿಧವಾದ ತಾರ-ತಮ್ಯವನ್ನು ಹೇಳಲಾರದು. ಧರ್ಮದ ವ್ಯಾಖ್ಯೆಯೆಂದರೆ ಮಾನವೀಯತೆ ಎಂದೇ ಅನುಭಾವಿಗಳ ಅರಿವು. ಧರ್ಮಸಂರಕ್ಷಣೆಯ ಸಲುವಾಗಿ ನೀತಿ ನಿಯಮಗಳು ಉದಯವಾದುವು. ಹಿಂಸೆಯನ್ನು ತ್ಯಜಿಸಿದ್ದು ಧರ್ಮ. ಯಾವುದೇ ರೂಪದ ಹಿಂಸೆಯನ್ನು ಧರ್ಮ ಹೇಳಲಾರದು. ದೈಹಿಕ, ಮಾನಸಿಕ ಹಿಂಸೆಗಳು ಧರ್ಮವಿರೋಧಿಗಳು. ಶರಣರಲ್ಲಿ ಎಂತೆಂಥ ಅಹಿಂಸಾಪರರಿದ್ದರೆಂದರೆ ಗಿಡದಿಂದ ಹೂವನ್ನು ಎತ್ತಲೂ ಹಿಂಜರಿಯುತ್ತಿದ್ದ ದಯಾಘನರಿದ್ದರು. ಅವರು ಹೂವನ್ನು ಕೀಳುತ್ತಿರಲಿಲ್ಲ, ಕೊಯ್ಯುತ್ತಿರಲಿಲ್ಲ, ಬಿಡಿಸುತ್ತಿರಲಿಲ್ಲ, ಎತ್ತುತ್ತಲೂ ಇರಲಿಲ್ಲ. ಹೂವಿನ ಗಿಡದ ಕೆಳಗಿನ ನೆಲವನ್ನು ಸ್ವಚ್ಛಗೊಳಿಸಿ, ತೆಳುವಾದ ಬಟ್ಟೆಯನ್ನು ಹಾಸುತ್ತಿದ್ದರು. ಅದರ ಮೇಲೆ ಗಾಳಿಗೆ ಅಲುಗಾಡಿ ಗಿಡದಿಂದ ಉದುರಿದ ಹೂವುಗಳನ್ನು ಆಯ್ದುತಂದು ಪೂಜೆ ಮಾಡುತ್ತಿದ್ದರು. ಧರ್ಮಭೀರುಗಳು. ಹಿಂಸಾಭೀರುಗಳವರು ಬಹುಸೂಕ್ಷ್ಮ ಧರ್ಮವೆಂಬುದು. ಉಪದೇಶ, ಉಪನ್ಯಾಸ, ಪ್ರವಚನ, ಚರ್ಚೆ, ಸಂವಾದಗಳಿಗೆ ಗೋಚರಿಸುವುದಿಲ್ಲ. ಶುದ್ಧಾಂತಃಕರಣಕ್ಕೆ ಕಾಣಿಸುವಂಥದ್ದು ಧರ್ಮ. ಆಗಾಗ ಪತ್ರಿಕೆಗಳಲ್ಲಿ ಕಾಣಬರುವ ನಾಯಿ ಕೋತಿಮರಿಗೆ, ಕೋತಿ ಬೆಕ್ಕಿನ ಮರಿಗೆ , ತಾಯ್ತನವೇ ಮೂರ್ತಿವೆತ್ತು ಬಂದ ಮಹಿಳೆ ಕೋತಿಮರಿಗೆ ಹಾಲುಣಿಸುವ ಹೃದಯವಂತಿಕೆಯೇ ನಿಜವಾದ ಧರ್ಮ. ದಿನಾಂಕ ೨-೨-೨೦೦೪ರಂದು 'ಪ್ರಜಾವಾಣಿ' ಪತ್ರಿಕೆಯಲ್ಲಿ ಒಂದು ಸುದ್ದಿ ಪ್ರಕಟವಾಯಿತು. ''ತ್ರಿಪುರಾದ ಚಂದ್ರಾಪುರದ 'ನಮಿತಾದಾಸ್' ಎಂಬ ತಾಯಿ ಕೋತಿಮರಿಯೊಂದಕ್ಕೆ ತನ್ನ ಎದೆಹಾಲುಣಿಸುತ್ತಿರುವ ಚಿತ್ರ ಪ್ರಕಟವಾಗಿತ್ತು. ಅದು ನಿಜವಾದ ಧರ್ಮ. ''ಅಂಗವಿಚ್ಛೆಗೆ ಮದ್ಯಮಾಂಸವ ತಿಂಬುದಲ್ಲ''. ಮನುಷ್ಯ ತನ್ನ ಸುಖಕ್ಕಾಗಿ, 'ಹಿಂಸಾರಭಸಮತಿ'ಯಾಗುತ್ತ ಬಂದಿರುವುದು ಚರಿತ್ರೆಯಿಂದ ತಿಳಿದು ಬರುವ ಸತ್ಯ. ಧರ್ಮ ಕತ್ತಲಿನಿಂದ ಬೆಳಕಿನ ಕಡೆಗೆ ನಡೆಯೆನ್ನುತ್ತದೆಯೇ ಹೊರತು ಬೆಳಕಿನೆಡೆಯಿಂದ ಕತ್ತಲೆಡೆಗೆ ಎನ್ನುವುದಿಲ್ಲ. ''ದಯವೇ ಧರ್ಮದ ಮೂಲ''ವೆಂಬ ಬಸವಣ್ಣನವರ ನುಡಿ ಧರ್ಮದ ತಾಯಿಬೇರು.* ✻

ಓಂ

# ಶ್ರೀ ಸಿದ್ಧಲಿಂಗೇಶ್ವರ ವಚನ

*ಹಿಂದಳ ಅಂಗ, ಮುಂದಳ ಮುಖ, ಉಭಯ ಚೈತನ್ಯ*
*ಸ್ವರೂಪವೆಂದು ಹೇಳುವರಯ್ಯ*
*ಹಿಂದುಮುಂದು ಉಭಯ ಚೈತನ್ಯವೆಂಬಕ್ಷರ ಬಂದಿತ್ತು ನೋಡಾತೊಡರು*
*ಹಿಂದುಮುಂದು ಉಭಯ ಚೈತನ್ಯವೊಂದೂ ಇಲ್ಲದ ವರ್ತನೆ*
*ಸರ್ವಾಚಾರ ಸಂಪತ್ತು ನಿಮ್ಮ ಶರಣ ಚರಿತ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !*

ಆದಿಯಾಗಿ ಹುಟ್ಟಿದ್ದು ಆತ್ಮ, ಅನಾದಿಯಾಗಿ ಹುಟ್ಟಿದ್ದು ದೇಹ. ಇವೆರಡೂ ಕೂಡಿದ್ದು ಚೈತನ್ಯಸ್ವರೂಪ. ಇವು ಭ್ರಾಂತು ಭಾವನೆಯುಳ್ಳ ಮತಾಂತರಜ್ಞಾನಿಗಳು. ಆದಿಯೇ ಆತ್ಮ, ಅನಾದಿಯೇ ದೇಹವೆಂಬೆರಡು ಚೈತನ್ಯ ಸ್ವರೂಪವೆನ್ನುವಾಗ ಅವು ಭವಬಂಧನದ ತೊಡರು ಬಿಡಲಾರದು. ದೇಹಾತ್ಮ ರೆಂಬೆರಡರ ಸಂಶಯವುಂಟಾಗದೆ ಇದ್ದ ಅಂಗಲಿಂಗ ಸಂಬಂಧ ಸಮರಸಜ್ಞಾನ ಕ್ರಿಯಾಚಾರದ ಐಶ್ವರ್ಯವು ಲಿಂಗನಿಷ್ಠಾ ಪರತತ್ವವನ್ನುಳ್ಳ ಶರಣನ ನಡತೆಯೆನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀವಾಣಿ

ಪ್ರಪಂಚದಲ್ಲಿ ಬಹಳ ಮಂದಿ ಪರಿಪೂರ್ಣ ಜೀವನದ ಅರ್ಥಮಾಡಿಕೊಂಡಿಲ್ಲ. ಅಪರಿಪೂರ್ಣ ಜೀವನವನ್ನೇ ಪರಿಪೂರ್ಣ ಎಂಬ ಭ್ರಮೆ, ಭ್ರಾಂತಿಯ ಜೀವನವನ್ನು ನಡೆಸುತ್ತಿದ್ದಾರೆ. ಆದ್ದರಿಂದ ಪರಿಪೂರ್ಣ ಜೀವನದ ಅರ್ಥವನ್ನು ಮಾಡಿಕೊಳ್ಳುವುದು ಬಹಳ ಮುಖ್ಯವಾದುದು.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಕರಸ್ಥಲದ ಜ್ಯೋತಿಯೆ ಅರಿವಿನರಮನೆಯೆಂದೆ
ವರಪ್ರಾಣಸ್ಥಲದ ನಿಧಿಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಕುರುಡಕಾಣ ಪಥವ ಹೆಳವನ ನಡೆಯಲರಿಯ''
ಇಬ್ಬರೊಂದಾದಾಗ ಫಲವೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏನೆಂಬನೇನೆಂಬೆ ತವ ಲಿಂಗನುಡಿಗಳ
ಜಗದೆಲ್ಲ ಜ್ಞಾನಗಳ ಪರಿಚಯಿಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಾನುಭಾವಿಗಳು ಜೀವಾನುಭಾವಿಗಳು
ಪ್ರಾಣಾನುಭಾವಿಗಳು ನಿನಗೆ ಸಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಾನುಭಾವಿಯೆ ಲಿಂಗಾನುಯೋಗಿಯೆ
ಲಿಂಗಕೋಟಿ ಶಾಂತಭಾಸ್ಕರನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಷ್ಟಾಂಗಯೋಗಗಳ ಅಂತರಂಗವನರಿದ
ಶಿವಯೋಗ ರವಿತೇಜನೆನಿಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೆಳಗಿನೊಳಗಿನ ಬೆಳಗೆ ಶಾಂತರವಿ ತಿಳಿ ಬೆಳಗೆ
ಘನವನೊಳಕೊಂಡ ಮಹ ಬೆಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಷ್ಟಲಿಂಗವ ಧರಿಸಿ ಶಿಷ್ಟರನವಗಣಿಸಿ
ಭ್ರಷ್ಟರಾದವರನುದ್ಧರಿಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀಡೆನಗೆ ಬೇಡುವೆ ಬಚ್ಚ ಬರಿಯ ಸೇವೆ
ಮಾಡೆನಗೆ ದಂಡನೆ ಅಡಿಗಡಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಯ ಒಳಗನು ತಿಳಿಯ ಹೇಳಲು ಬಂದ
ಭಕ್ತಿಯ ಬೆಳಸನು ಬೆಳೆಯಬಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ಭಕ್ತಿಯಿಲ್ಲದ ಬಡವ ನಾನಯ್ಯ!*
*ಕಕ್ಕಯ್ಯನ ಮನೆಯಲು ಬೇಡಿದೆ!*
*ಚೆನ್ನಯ್ಯನ ಮನೆಯಲು ಬೇಡಿದೆ!*
*ದಾಸಯ್ಯನ ಮನೆಯಲು ಬೇಡಿದೆ!*
*ಎಲ್ಲಾ ಪುರಾತನವು ನೆರೆದು ಭಕ್ತಿ ಭಿಕ್ಷವನ್ನಿಕ್ಕಿದರೆ*
*ಎನ್ನ ಪಾತ್ರ ತುಂಬಿತ್ತು ಕೂಡಲಸಂಗಮದೇವ.*

ಬಸವಣ್ಣನವರನ್ನು ಶರಣಜನಕೋಟಿಯೆಲ್ಲ ಒಕ್ಕೊರಲಿನಿಂದ 'ಭಕ್ತಿ ಭಂಡಾರಿ' ಎಂದು ಪ್ರಶಂಸಿಸಿ ಪುರಸ್ಕರಿಸಿದರೂ, ಅವರು ತಮ್ಮನ್ನು ತಾವು ''ಭಕ್ತಿಯಿಲ್ಲದ ಬಸವ''ನೆಂದು ಕೂಡಿರುವರು. ಅವರ ಈ ಮಾತಿನಲ್ಲಿ – ತಮ್ಮ ಭಕ್ತಿಯು ಆದರ್ಶಪ್ರಮಾಣದಲ್ಲಿಲ್ಲವೆಂಬ, ಇರುವುದು ಅಲ್ಪ ಸ್ವಲ್ಪವಾದರ ಅದು ಡೋಹರ ಕಕ್ಕಯ್ಯ-ಮಾದಾರ ಚೆನ್ನಯ್ಯ-ಚೀಡರ ದಾಸಯ್ಯ ಮುಂತಾದ ಆದರ್ಶ ಭಕ್ತರ ಕೃಪೆಯಿಂದಾಗಿ ದೊರೆತುದೆಂಬ, ಆದುದರಿಂದಲೇ ಅದು ತನ್ನ ಆತ್ಮೋದ್ಧಾರಕ್ಕೆ ಸಮರ್ಥವಾಗಿದೆಯೆಂಬ – ಈ ಮೂರು ಭಾವಗಳೂ ಮುಪ್ಪುರಿಗೊಂಡಿವೆ.

ಭಂಡಾರದಲ್ಲಿರುವುದು ಬಹಳವಿದ್ದರೂ ಅಲ್ಲಿರುವುದೊಂದೂ ಭಂಡಾರಿಯದಲ್ಲ; ಭಿಕ್ಷುಕನ ಕೈಯ ಪಾತ್ರೆಯಲ್ಲಿ ಬಹಳವಿಲ್ಲದಿದ್ದರೂ ಇರುವುದೆಲ್ಲ ಅವನದೇ! ಈ ಅರ್ಥದಲ್ಲಿ ಬಸವಣ್ಣನವರು ತಮ್ಮನ್ನು ಭಕ್ತಿಭಂಡಾರಿಯಲ್ಲವೆಂದೂ, ಕೇವಲ ''ಭಕ್ತಿಯ ಬಡವ''ನೆಂದೂ ಕರೆದುಕೊಂಡಿರುವುದು ಅರ್ಥವತ್ತಾಗಿದೆ.

*ಬಸವ ಬಾರಯ್ಯ*
*ಮರ್ತ್ಯಲೋಕದೊಳಗೆ ಭಕ್ತರುಂಟೆ ಹೇಳಯ್ಯ?*
*ಮತ್ತಾರೂ ಇಲ್ಲಯ್ಯ! ಮತ್ತಾರೂ ಇಲ್ಲಯ್ಯ!*
*ನಾನೊಬ್ಬನೇ ಭಕ್ತನು*
*ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ*
*ಜಂಗಮಲಿಂಗ ನೀನೇ ಅಯ್ಯ ಕೂಡಲಸಂಗಮದೇವ*

ಮರ್ತ್ಯಲೋಕದಲ್ಲಿ ಭಕ್ತಿಯ ಬೀಜವನ್ನು ಬಿತ್ತುವುದಕ್ಕಾಗಿಯೇ ಬಸವಣ್ಣನವರು ಶಿವನ ಆಜ್ಞೆಯನ್ನು ಶಿರಸಾವಹಿಸಿ ಅವತರಿಸಿದವರು. ಅವರ ನೇತೃತ್ವದಲ್ಲಿ ಕರ್ನಾಟಕದೆಲ್ಲೆಡೆಯಲ್ಲೂ ಭಕ್ತಿಯ ಬೆಳೆ ಹುಲುಸಾಗಿ ಬಂದಿತು, ಬಂದ ಕೆಲಸವಾಯಿತು. ಭೂಮಿಯ ಮೇಲೆ ಭಕ್ತರ ಬಳಗ ಬೆಳೆಯಿತು. ಇನ್ನು ಕೈಲಾಸಕ್ಕೆ ಬಾರೆಂದು ಶಿವನು ಬಸವಣ್ಣನವರನ್ನು ಕೈಬೀಸಿ ಕರೆದಾಗ, ಅವರು ಶರಣರ ಸಂಗವನ್ನಗಲಿ ಬರಲಾರದೆ – ಭೂಲೋಕದಲ್ಲಿ ಭಕ್ತರಾರೂ ಇಲ್ಲ, ಇರುವ ಭಕ್ತನೆಂದರೆ ನಾನೊಬ್ಬನೇ! ಬರಲಾರೆನೆನ್ನುವರು! ಬಸವಣ್ಣನವರ ಈ ಆತ್ಮ ಪ್ರಶಂಸಾಭಾಸದ ಮಾತನ್ನು ಕೇಳಿ, ಎನಗಿಂತ ಕಿರಿಯರಿಲ್ಲವೆಂದವರು ಇವರೇ ಅಲ್ಲವೇ ಎಂದು ಚಕಿತರಾಗುತ್ತೇವೆ. ಚಕಿತರಾಗುವುದೇಕೆ? ಅವರೇ ಮುಂದೆ ಹೇಳಿರುವಂತೆ ಮರ್ತ್ಯಲೋಕದ ಜನರೆಲ್ಲರೂ ನಡೆದಾಡುವ ಮಹಾದೇವಸ್ವರೂಪಿಗಳಾಗಿರುವರು. ಅವರಿಗೆ ಸೇವೆಮಾಡಲು ಉಳಿದಿರುವವರು ತಾವೊಬ್ಬರೇ ಅಂತೆ! ಕೈಲಾಸದಲ್ಲಿ ಶಿವನ ಸೇವೆಮಾಡಲು ಅಸಂಖ್ಯಾತ ಗಣಗಳಿರುವಾಗ, ಅಲ್ಲಿ ಬಂದು ಮಾಡುವುದೇನಿದೆ, ಇಲ್ಲೇ ನಿಂತು ನಿನ್ನ (ವರ) ಸೇವೆ ಮಾಡಿಕೊಂಡಿರುವೆನೆಂದು ಶಿವನೊಡನೆ ಸರಸವಾಡಿರುವರು. ಈ ಸರಸದಲ್ಲಿ ತಮ್ಮಿಂದ ಈ ಲೋಕ ಭಕ್ತಮಯವಾಗುವುದಿರಲಿ ಶಿವಮಯವಾಯಿತೆಂಬ ಕೃತಕೃತ್ಯೆಯೂ, ತಮಗೆ ಶಿವಲೋಕಕ್ಕಿಂತ ಶಿವಭಕ್ತರ ಸೇವೆಯೇ ಶ್ರೇಷ್ಠವೆಂಬ ಕೈಂಕರ್ಯವೂ ಸಮರಸವಾಗಿ ಬೆರತಿದೆ.

*ಭಕ್ತಿಯೆಂಬ ಪೃಥ್ವಿಯ ಮೇಲೆ*
*(ಗುರುವೆಂಬ ಬೀಜವಂಕುರಿಸಿ*
*ಲಿಂಗವೆಂಬ ಎಲೆಯಾಯಿತ್ತು!)*
*ತನುವೆಂಬ ಕಟ್ಟೆಯ ಕಟ್ಟಿ*
*ಮನವೆಂಬ ಅಗ್ಘವಣಿಯನೆರೆದು*
*ಭಾವವೆಂಬ ಬೇಲಿಯ ಕಟ್ಟಿ*
*ಲಿಂಗವೆಂಬ ಎಲೆಯ ಮೇಲೆ*
*ವಿಚಾರವೆಂಬ ಹೂವಾಗಿ*
*ಆಚಾರವೆಂಬ ಕಾಯಾಗಿ*
*ನಿಷ್ಪತ್ತಿಯೆಂಬ ಹಣ್ಣಾಗಿ*
*ತೊಟ್ಟುಬಿಟ್ಟು ಬೀಳುವಲ್ಲಿ*
*ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡ!*

ಭಕ್ತಿಯೇ ಮುಕ್ತಿಗೆ ಮೂಲಭೂಮಿಕೆ! ಆ ಭಕ್ತಿಯ ಭೂಮಿಕೆಯಲ್ಲಿ ಗುರುಕೃಪೆಯಿಂದ ಲಿಂಗದರ್ಶನವಾಗಿ, ತನು-ಮನ-ಭಾವಸರ್ವಸ್ವವೂ ಅದಕ್ಕೆ ಅರ್ಪಿತವಾದಾಗ, ಸದ್ವಿಚಾರವೂ, ಸದಾಚಾರವೂ, ನಿರಂಜನವಾದ ನಿಲವೂ ಅಳವಡುವುದು. ಅಂತಹ ಪರಿಪಕ್ವ ರಸಜೀವರನ್ನು ಶಿವನು ತನ್ನೊಳಗುಮಾಡಿಕೊಳ್ಳುವನೆಂಬ ಸಂದೇಶಸುಧೆಯನ್ನು ಸಸ್ಯ-ಜೀವನ ವಿಕಾಸೋಪಮಾನಪ್ರಣಾಳಿಕೆಯಲ್ಲಿ ಸಾಧಕವರ್ಗಕ್ಕೆ ಹರಿಯಬಿಟ್ಟಿರುವರು ಬಸವಣ್ಣನವರು. ಮತ್ತು ನಮ್ಮ ಜೀವನವೆಂಬ ತೋಟಕ್ಕೆ ಪರಶಿವನೇ ಮಾಲೀಕ, ನಾವು ಕೇವಲ ಮಾಲಿಗಳಷ್ಟೇ. ಅಲ್ಲಿ ನಾವು ಬೆಳೆದ ಜೀವನ್-ಮುಕ್ತಿಯ ಮಾದಲದ ಹಣ್ಣು ಶಿವನಿಗೆ ತನಿರಸದುಣಿಸಾದರೆ, ಅದಕ್ಕೆ ಸಂಭಾವನೆಯಾಗಿ ಅವನು ನಮ್ಮನ್ನು ತನ್ನವನೆಂದು ತನ್ನೊಳಗು ಮಾಡಿಕೊಳ್ಳುವನು.

(ಕೃಪೆ : ಬಸವ ವಚನಾಮೃತ)



# ಬ್ರಹ್ಮ ಮತ್ತು ಸೃಷ್ಟಿ

– ಕವಿತಾಕೃಷ್ಣ
ಪ್ರಸಿದ್ಧ ಸಾಹಿತಿಗಳು,
ಕ್ಯಾತಸಂದ್ರ.

ಉಪನಿಷತ್ ಹಲವು ಸಿದ್ಧಾಂತಗಳ ಆಗರ. ಅದು ಹಲವು ಶಕ್ತಿಗಳಿಂದ ರೂಪುಗೊಂಡ ಸಾಗರ. ಅದು ನೋಡಿದಷ್ಟು ವಿಶಾಲ. ಇಳಿದಷ್ಟು ಆಳ. ಆರಿಸಿದಷ್ಟು ಮುತ್ತುಮಣಿಗಳು ಲಭಿಸುತ್ತವೆ.

ಉಪನಿಷತ್ ಬ್ರಹ್ಮನನ್ನು ಕುರಿತು ಚಿಂತನೆ ನಡೆಸಿವೆ. ಯಾವುದರಿಂದ ಪ್ರಾಣಿಗಳೆಲ್ಲಾ ಹುಟ್ಟುವವೋ, ಯಾವುದರಲ್ಲಿ ಜೀವಿಸುತ್ತವೆಯೋ, ಕಡೆಗೆ ಯಾವುದರಲ್ಲಿ ಐಕ್ಯವಾಗುವವೋ ಅದೇ ಬ್ರಹ್ಮ ಎಂದು ತೈತ್ತರೀಯ ಉಪನಿಷತ್ ಹೇಳುತ್ತದೆ. ಬ್ರಹ್ಮದಲ್ಲಿನ ವಿಭಾಗಗಳಾದ ಸುಗುಣಬ್ರಹ್ಮ ಹಾಗೂ ನಿರ್ಗುಣ ಬ್ರಹ್ಮನನ್ನು ಕುರಿತಂತಹ ಹಲವು ಭಾವನೆಗಳಿವೆ. ಹಾಗೆಯೆ ನಾದಬ್ರಹ್ಮನ ಬಗೆಗಿನ ಭಾವನೆಗಳೂ ಅಲ್ಲಿವೆ. ಈ ಪ್ರಕಾರಗಳಿಗೆಲ್ಲಕ್ಕು ಅತೀತನಾದ ಬ್ರಹ್ಮನ ಭಾವನೆಯೂ ಇದೆ. ಜೀವಿಯ ಬಗೆಗೂ ಮಾಹಿತಿ ಇದೆ. ಜೀವಿ-ಬ್ರಹ್ಮರ ಬಗೆಗೂ ವಿರೋಧಾಭಾಸ ಭಾವನೆಗಳಿವೆ.

ಬ್ರಹ್ಮದ ಬಗ್ಗೆ ಉಪನಿಷತ್ ಹೀಗೆ ವಿವರಿಸುತ್ತದೆ : ''ಬ್ರಹ್ಮಕ್ಕೆ ಆಕಾರವಿಲ್ಲ. ಅದು ನಿರ್ಗುಣ. ಇಂದ್ರಿಯಾತೀತವಾದರೂ ಪ್ರಪಂಚದಲ್ಲೆಲ್ಲ ವ್ಯಾಪಕವಾಗಿರುವುದು. ಅದು ಅತೀತವೂ ಆಗಿದೆ.'' ಮತ್ತೆ ಬ್ರಹ್ಮ ಸರ್ವವ್ಯಾಪಿ, ಶರೀರ ರಹಿತ, ಜ್ಯೋತಿರ್ಮಯ, ನರರಹಿತ. ವ್ರಣರಹಿತ, ಪರಿಶುದ್ಧ, ಪಾಪರಹಿತ, ಆವನು ಕವಿ, ಸರ್ವೋತ್ತಮ, ಸ್ವಯಂಬು'' ಎಂದು ಈಶಾವಾಸ್ಯ ಉಪನಿಷತ್ ಬಣ್ಣಿಸಿದೆ. ಕೇನ ಉಪನಿಷತ್ ''ಯಾವುದು ಮಾತಿನಿಂದ ವ್ಯಕ್ತವಾಗದೋ, ಯಾವುದು ಮಾತು ವ್ಯಕ್ತವಾಗುವುದೋ ಅದೇ ಬ್ರಹ್ಮನೆಂದು ತಿಳಿ'' ಎಂದು ಮನವರಿಕೆ ಮಾಡುತ್ತದೆ.

ಬ್ರಹ್ಮ ಅಣುವಿಗಿಂತ ಅಣು, ಮಹತ್ತಿಗಿಂತ ಮಹತ್ತು, ಸರ್ವರ ಹೃದಯಗಳಲ್ಲೂ ಸ್ಥಿರವಾಗಿದೆ. ಅದು 'ಎಳ್ಳಿನಲ್ಲಿರುವ ಎಣ್ಣೆಯಂತೆ, ಮೊಸರಲ್ಲಿರುವ ತುಪ್ಪದಂತೆ, ನದಿಯ ತಳದಲ್ಲಿರುವ ನೀರಿನಂತೆ, ಆರಣೆಯೊಳಗಿರುವ ಅಗ್ನಿಯಂತೆ ಸೃಷ್ಟಿ ಮಾಡಿದ ಬ್ರಹ್ಮ ಪ್ರಪಂಚದಲ್ಲೇ ಅಡಗಿದ್ದಾನೆ' ಎನ್ನುತ್ತದೆ ಶ್ವೇತಾಶ್ವತರ ಉಪನಿಷತ್, ಮುಂದುವರೆದು ಬ್ರಹ್ಮನು ಎಲ್ಲಾ ಕಡೆಗಳಲ್ಲೂ ಕಣ್ಣು, ಮುಖ, ಬಾಹು, ಪಾದಗಳನ್ನು ಅನಂತವಾಗಿ ಹೊಂದಿದ್ದಾನೆ. ಆ ಪುರುಷನಿಗೆ ಸಹಸ್ರಾರು ಶಿರಗಳು, ಸಹಸ್ರಾರು ಕಂಗಳು, ಸಹಸ್ರಾರು ಪಾದಗಳು, ಅತ್ಯತಿಷ್ಟ ದಶಾಂಗೂಲನಂತೆ. ಎಲ್ಲರಿಗಿನ್ನ, ಎಲ್ಲಕ್ಕಿನ್ನ ಹತ್ತು ಅಂಗುಲದಷ್ಟು ಮೀರಿ ನಿಂತಿದ್ದಾನೆ. ಆತ ಅಮೃತತ್ವಕ್ಕೆ ಯಜಮಾನ. ಯಾವುದು ಅನ್ನದಿಂದ ವರ್ಧಿಸುವುದೋ ಅದಕ್ಕೂ ಯಜಮಾನ ಎಂದು ಬಣ್ಣಿಸುತ್ತದೆ.

ಪ್ರಶ್ನೋಪನಿಷತ್ ಪ್ರಪಂಚವನ್ನು ಸೃಷ್ಟಿಸಿದ್ದು ಬ್ರಹ್ಮ. ಇದನ್ನು ಸೃಷ್ಟಿಸುವ ಮುನ್ನ ಆತ ತಪಸ್ಸು ಮಾಡಿದ ಎನ್ನುತ್ತದೆ. ಬ್ರಹ್ಮನು ತಪಸ್ಸು ಮಾಡಿದ ಎಂದರೆ ಪ್ರಪಂಚ ಹೀಗಿರಬೇಕೆಂದು ಚಿಂತಿಸಿದ ಎಂದು ಭಾವಿಸಬೇಕಾಗುವುದು. ಆನಂತರ ಪ್ರಾಣ, ದ್ರವ್ಯಗಳನ್ನು ಸೃಷ್ಟಿಸಿದನಂತೆ. ಅವೆರಡು ಅನೇಕ ರೀತಿಯಲ್ಲಿ ಸಂಮಿಶ್ರಗೊಂಡು ಈ ಜಗತ್ತು ರೂಪುಗೊಂಡಿತಂತೆ. ಆಗ ಪಕ್ಷಿ, ಪ್ರಾಣಿ, ಮಾನವ ಹೀಗೆ ಅನೇಕಾನೇಕಗಳು ರೂಪುಗೊಂಡವಂತೆ. ಮುಂಡಕ ಉಪನಿಷತ್ ಕೂಡ ಇದನ್ನೆ ಒಪ್ಪುತ್ತದೆ. ಅದು ಸೃಷ್ಟಿಗೆ ಮೂಲಕಾರಣನಾದ ಆ ಪುರುಷನಿಂದಲೇ ಋಕ್ಕುಗಳು, ಸಾಮಗಳು, ಯಜಸ್ಸು, ದೀಕ್ಷೆಗಳು, ಎಲ್ಲಾ ಯಜ್ಞಗಳು ಮತ್ತು ಕ್ರತುಗಳು, ದಕ್ಷಿಣೆಗಳು, ಸಂವತ್ಸರ ಯಜಮಾನ, ದೇವತೆಗಳು, ಮನುಷ್ಯರು, ಪಶು ಪಕ್ಷಿ ಪ್ರಾಣಿಗಳು ಹುಟ್ಟಿದವು. ಆತನಿಂದಲೇ ಪರ್ವತ, ಸಮುದ್ರ, ನದಿಗಳು ರೂಪಗೊಂಡವು. ಎಲ್ಲಾ ಧವಸ ಧಾನ್ಯ, ರಸಗಳು ಸೃಷ್ಟಿಗೊಂಡವು ಎನ್ನುತ್ತದೆ. ಒಟ್ಟಾರೆ ನಾವಿರುವ ಪ್ರಪಂಚ, ನಮ್ಮ ಸುತ್ತಮುತ್ತಲಿರುವ ಎಲ್ಲವೂ ಪರಮಪುರುಷ, ಬ್ರಹ್ಮನಿಂದ ರೂಪಗೊಂಡಂಥವು ಎಂದು ಉಪನಿಷತ್‌ಗಳು ಸಾರುತ್ತವೆ.

ಉರಿಯುವ ಅಗ್ನಿಕುಂಡದಿಂದ ಸಾವಿರಾರು ಕಿಡಿಗಳು ಹುಟ್ಟುವುದು ಸಹಜ. ಹಾಗೆಯೆ ಅಕ್ಷರದಿಂದ ನಾನಾ ಬಗೆಯಾದ ಜೀವಿಗಳು ಹುಟ್ಟುತ್ತವೆ. ಹುಟ್ಟುವುದು ಮಾತ್ರವಲ್ಲ; ಅದರಲ್ಲಿಯೇ ಲೀನವಾಗುತ್ತದೆ. ಮುಂಡಕೋಪನಿಷತ್ ಈ ಬಗ್ಗೆ ಸಾಕಷ್ಟು ಗ್ರಾಸವನ್ನು ಒದಗಿಸಿದೆ. ನದಿಯ ಸಾಗರದೊಡನೆ ಕೂಡುವಾಗ ತನ್ನ ರೂಪ, ಪಾತ್ರ, ಹೆಸರನ್ನು ಹೇಗೆ ಕಳೆದುಕೊಳ್ಳುವುದೋ ಹಾಗೆಯೇ ನಾವು ಅವನನ್ನು ಕೂಡುವಾಗ ನಮೆಲ್ಲವನ್ನು ಕಳೆದುಕೊಳ್ಳುತ್ತೇವೆ.

ಪ್ರತಿಜೀವಿಯು ಬ್ರಹ್ಮನಿಂದಲೇ ಬಂದವನು. ಬ್ರಹ್ಮನಲ್ಲಿರುವ ಗುಣವಿಶೇಷಣಗಳು ನಮ್ಮೆಲ್ಲರಲ್ಲಿಯೂ ಇರುವುದು ಸತ್ಯ. ಜ್ಞಾನಶಕ್ತಿ ಪವಿತ್ರತೆ ಮೊದಲಾದ ಗುಣಗಳು ನಮ್ಮಲ್ಲಿ ಸುಪ್ತವಾಗಿರುವವು. ಅಧ್ಯಾತ್ಮಿಕ ಸಾಧನೆಗಳಿಂದ ಸುಪ್ತವಾಗಿರುವ ಗುಣವಿಶೇಷಗಳೆಲ್ಲ ಜಾಗೃತವಾಗುವುದು. ಹೊರಜಗತ್ತಿಗೆ ಅರಿವಾಗುವುದು. ಬ್ರಹ್ಮನ ಹಿರಿಮೆಗಳೆಲ್ಲವನ್ನೂ ಆಮೂಲಾಗ್ರವಾಗಿ ಯಾವನು ತಿಳಿದುಕೊಳ್ಳುವನೋ, ಅವನು ಬ್ರಹ್ಮವೇ ಆಗುವನು. ಬೃಹದಾರಣ್ಯಕ ಉಪನಿಷತ್ ಈ ಬಗ್ಗೆ ಹೃತ್‌ಸ್ಪರ್ಶಿಯಾಗಿ ವಿವರಿಸುವುದು.

ಉಪನಿಷತ್‌ಗಳು ಬ್ರಹ್ಮ ಮತ್ತು ಸೃಷ್ಟಿಯ ಬಗ್ಗೆ ಸಾಕಷ್ಟು ಪ್ರಭಾವಯುತವಾಗಿ, ಸೋದಾಹರಣವಾಗಿ ವಿವರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿವೆ. ಬ್ರಹ್ಮವು ಆತ್ಮನಲ್ಲಿರುವುದು. ಅದನ್ನು ಯಾವ ವಿವೇಕಿಗಳು ನೋಡುತ್ತಾರೆಯೋ ಅವರಿಗೆ ಶಾಶ್ವತವಾದ ಸುಖ ಲಭಿಸುವುದು. ಜೀವಿಯ ಆಗಮನವೂ ಬ್ರಹ್ಮದಿಂದ. ಜೀವಿಯ ನಿರ್ಗಮನವೂ ಬ್ರಹ್ಮದೆಡೆಗೆ. ಜೀವಿಯಲ್ಲಿ ಬ್ರಹ್ಮನಿದ್ದರೂ ಸಹ ನಾಮರೂಪಗಳ ಗೊಂದಲಗಳಲ್ಲಿ ಆತ ನಿಜವಾದ ಸ್ವಭಾವವನ್ನೇ ಮರೆತುಬಿಡುವನು. ನಾವು ಇಂದ್ರಿಯಗಳನ್ನು ನಿಗ್ರಹಿಸಿ, ಅದನ್ನು ಅಂತರ್ಮುಖಿಗೊಳಿಸಿದರೆ ಜೀವಿಯು ಪರಮಾತ್ಮನ ಸಮೀಪ ಹೋಗುವುದು. ಇಂದ್ರಿಯಗಳನ್ನು ಜಯಿಸೋಣ. ಬ್ರಹ್ಮವನ್ನು ಒಲಿಸಿಕೊಳ್ಳೋಣ.

★







# ವಚನ ಸಾಹಿತ್ಯದಲ್ಲಿ ಗುರುವಿನ ಸ್ವರೂಪ

– ವಿಕ್ರಮ ವಿಸಾಜಿ
ಅಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ,
ಸ್ನಾತಕೋತ್ತರ ಕೇಂದ್ರ, ಗು.ವಿ.ಗು.
ನಂದಿಹಳ್ಳಿ, ಸಂಡೂರು, ಬಳ್ಳಾರಿ ಜಿಲ್ಲೆ.

ಈಗ ಕನ್ನಡದ ಸಾಂಸ್ಕೃತಿಕ ಚರ್ಚೆಯಲ್ಲಿ ಹೆಚ್ಚು ಮಹತ್ವ ಪಡೆದುಕೊಂಡಿರುವ ಸಂದರ್ಭ ಯಾವುದೆಂದರೆ ವಚನ ಸಾಹಿತ್ಯ. ಭಾರತದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಒಂದು ಅತ್ಯಂತ ಮಹತ್ವದ ಕಾಲಘಟ್ಟವೆಂಬುದು ನಮಗೆಲ್ಲರಿಗೂ ಗೊತ್ತು. ವ್ಯವಸ್ಥೆಯ ರೋಗಗಳಾದ ಅಜ್ಞಾನ, ಅಂಧಕಾರ, ಮೌಢ್ಯ, ಕಂದಾಚಾರ, ಜಾತೀಯತೆ, ಮತಾಂಧತೆ, ಶೋಷಣೆ ಮುಂತಾದವುಗಳಲ್ಲಿ ಮುಳುಗಿ ಹೋಗಿದ್ದ ಸಮಾಜವನ್ನು ಎಚ್ಚರಿಸುವ, ಸರಿದಾರಿಗೆ ತರುವ ಯತ್ನವನ್ನು ವಚನಕಾರರು ಮಾಡಿದರು. ಒಟ್ಟಾರೆ ಮಾನವೀಯ ಕಾಳಜಿಗಳನ್ನು ಎತ್ತಿಹಿಡಿಯಲು ನಡೆಸಿದ ಸಮಷ್ಟಿ ಹೋರಾಟವಾಗಿತ್ತದು. ಅವರೆಲ್ಲ ನುಡಿದಂತೆ ನಡೆದರು.

ಪ್ರತಿಯೊಬ್ಬರೂ ಕೆಲಸದಲ್ಲಿ ತೊಡಗಿರಬೇಕಾದ ಅಗತ್ಯವನ್ನು 'ಕಾಯಕ'ದ ಮೂಲಕ ಸಾರಿದರು. ದುಡಿದದ್ದನ್ನು ಹಂಚಿಕೊಂಡು ಉಣ್ಣಲು 'ದಾಸೋಹ'ವನ್ನು ಪ್ರಚುರಪಡಿಸಿದರು. ದೇಹವನ್ನೇ ದೇವಾಲಯವನ್ನಾಗಿಸಿ 'ಸ್ಥಾವರ'ವನ್ನು ತಿರಸ್ಕರಿಸಿದರು. ಚಲನಶೀಲತೆಯನ್ನೇ ಮುಖ್ಯತತ್ವವನ್ನಾಗಿಸಿ 'ಜಂಗಮ'ವನ್ನು ಪುರಸ್ಕರಿಸಿದರು. ಹೀಗೆ ಕನ್ನಡದ ಪ್ರಜ್ಞೆಯನ್ನು ವಿಸ್ತರಿಸಿದ, ಕನ್ನಡದ ಚಿಂತನಾಕ್ರಮವನ್ನು ಹೊಸದಿಕ್ಕುಗಳಲ್ಲಿ ಮುನ್ನಡೆಸಿದ, ವಿವೇಕಯುತವಾದ ಹೆಜ್ಜೆಗಳನ್ನು ಕಾಣಿಸಿದ ಜಗತ್ತಿದು. ಇವರ ಕ್ರಿಯಾಶೀಲತೆಯ ಪರಿಣಾಮವಾಗಿ ಹೊಸಜೀವನ ಕ್ರಮವೊಂದು ರೂಪುಪಡೆಯಿತು. ಕಡ್ಡಾಯ ದುಡಿಮೆ, ಜಾತ್ಯತೀತ ಸಮಾಜದಲ್ಲಿ ಮನುಷ್ಯ ಮನುಷ್ಯರ ನಡುವೆ ಮುಕ್ತಸಂವಾದವನ್ನು ಏರ್ಪಡಿಸುವ ಮೂಲಕ ಹೊಸ ಅಧ್ಯಾತ್ಮವನ್ನು ಸೃಷ್ಟಿಸಿದರು. ಈ ಮೂಲಕ ಹಿಂದಿನ ಪಾವಿತ್ರ್ಯದ ಎಲ್ಲ ಸಂಕೇತಗಳನ್ನು ಪರಿಶೀಲನೆಗೊಳಪಡಿಸಿದರು. ಅದರಲ್ಲಿ 'ಗುರು' ಕೂಡ ಒಂದು.

## *ಗುರುವಿನ ಸ್ವರೂಪ*

ಸಾಮಾನ್ಯವಾಗಿ ಸಾಂಪ್ರದಾಯಿಕ ನೆಲೆಯೊಳಗೆ ಗುರುವನ್ನು ವಚನ ಸಾಹಿತ್ಯದಲ್ಲಿ ಮೂರು ಬಗೆಯಲ್ಲಿ ಕಾಣಲಾಗಿದೆ. ೧. ದೀಕ್ಷಾಗುರು, ೨. ಶಿಕ್ಷಾಗುರು, ೩. ಮೋಕ್ಷಗುರು. ಇವರು ಬೇರೆ ಬೇರೆ ಆಗಿರಬಹುದು ಅಥವಾ ಒಬ್ಬರೇ ಆಗಿರಬಹುದು. ಆದರೆ ಶಿವಪಥವನರಿಯಬೇಕಾದರೆ ಗುರುಪಥವನ್ನು ಸವೆಸಲೇಬೇಕೆಂಬ ದೃಢನಂಬಿಕೆ ಹಲವಾರು ವಚನಗಳಲ್ಲಿದೆ.

ವಚನಕಾರರ ದೃಷ್ಟಿಯಲ್ಲಿ ಗುರು ಕೇವಲ ಅಕ್ಷರವನ್ನು ಮಾತ್ರ ಕಲಿಸುವವನಲ್ಲ. ವ್ಯಕ್ತಿತ್ವ ವಿಕಸನಕ್ಕೆ ಕಾರಣನಾದಂಥವನು.

*''ಗುರುವೆಂಬುದು ತಾನು ಪರುಷವು*
*ಆ ಪರುಷ ಮುಟ್ಟಲೊಡನೆ ಉಳಿದ*
*ಲೋಹಂಗಳು ಸುವರ್ಣವಾದುವಲ್ಲದೆ*
*ಆ ಪರುಷವೇ ಆಗಲರಿಯವು''*

– ಎಂದು ಚನ್ನಬಸವಣ್ಣ ಗುರುವಿನ ಮಹಿಮೆಯನ್ನು ವರ್ಣಿಸಿದ್ದಾನೆ. ಎಲ್ಲ ಕಡೆಯೂ ದೇವರು ವ್ಯಾಪಿಸಿದ್ದರೂ ಎಲ್ಲರಿಗೂ ಆತ ಕಾಣುವುದಿಲ್ಲ. ಕಾಣುವಂತೆ ಮಾಡಬಲ್ಲ ಮಹಿಮೆ ಗುರುವಿನದು ಎಂಬುದು ದಾಸಿಮಯ್ಯನ ಅಭಿಮತ. ತುಂಬಾ ಕಠಿಣಮಾರ್ಗದಲ್ಲಿ ಗುರುವಿನ ನೆರವು ಅವಶ್ಯಕವೆಂದು ಅಲ್ಲಮ ಹೇಳಿದ್ದಾನೆ. ''ಕಂಡುದನೆ ಕಂಡು ಗುರುಪಾದವ ಹಿಡಿದಲ್ಲಿ ಕಾಣದುದ ಕಾಣಬಹುದು''. ಇದನ್ನೆ ಸಿದ್ಧರಾಮ ಹೀಗೆ ಹೇಳುತ್ತಾನೆ ''ಗುರುವಿನಿಂದ ಲಿಂಗವ ಕಂಡೆನಲ್ಲದೆ, ಲಿಂಗದಿಂದ ಲಿಂಗವ ಕಾಣಲಿಲ್ಲವಯ್ಯಾ''.

ಗುರುವನ್ನು ಹೀಗೆ ಅಪಾರ ಗೌರವದಿಂದ ಕಾಣುವ ವಚನಕಾರರು ಅವರ ವ್ಯಕ್ತಿತ್ವದ ಕುರಿತು ನಿಷ್ಠುರ ವಿಮರ್ಶೆಯನ್ನು ಮಾಡಿದ್ದಾರೆ. ವಚನಕಾರರಿಗೆ ಗುರುವಿನ ಬೋಧನೆಯಷ್ಟೇ ಆತನ ವ್ಯಕ್ತಿತ್ವಕೂಡ ಮುಖ್ಯವಾದದ್ದು. ಅಂತರಂಗಶುದ್ಧಿ,

ಬಹಿರಂಗಶುದ್ಧಿ, ಸ್ವವಿಮರ್ಶೆ, ಪ್ರಾಮಾಣಿಕತೆ, ಇವು ಗುರುವಿನಲ್ಲಿ ಇರಲೇಬೇಕಾದ ಮೂಲಭೂತ ಗುಣಗಳೆಂಬಂತೆ ಮೇಲಿಂದ ಮೇಲೆ ಪ್ರಸ್ತಾಪಿಸಿದ್ದಾರೆ. ಸತ್ಯವನ್ನು ಗುರುವಾದವನು ಎಷ್ಟು ಸರಿಯಾಗಿ ಮಂಡಿಸುತ್ತಾನೆಂಬುದಷ್ಟೇ ಮುಖ್ಯವಲ್ಲ, ಅವರು ಸತ್ಯವನ್ನು ನಿಜವಾಗಿಯೂ ಬದುಕಿಸುತ್ತಿದ್ದಾರೆಯೆ? ಎನ್ನುವುದು ಕೂಡ ಅವರಿಗೆ ಮುಖ್ಯ. ಅಂದರೆ ಬೋಧನೆ ಮತ್ತು ವ್ಯಕ್ತಿತ್ವದ ನಡುವೆ ಒಂದು ಘನಿಷ್ಠವಾದ ಸಂಬಂಧವನ್ನು ಅವರು ಅಪೇಕ್ಷಿಸಿದರು. ಈ ಸಂಬಂಧವನ್ನು ಅವರು ಬರೀ ಭಕ್ತರಿಗಷ್ಟೇ ಆರೋಪಿಸಲಿಲ್ಲ, ಗುರುವನ್ನು ಕೂಡ ಇದೇ ಚೌಕಟ್ಟಿಗೆ ಒಳಪಡಿಸಿದರು. ನಡೆ ಮತ್ತು ನುಡಿಯನ್ನು ಸಂದುಕಾಣದ ಹಾಗೆ ಬೆರೆಸಿದ ವಚನಕಾರರಿಗೆ ಇದು ಗುರುವಿನ ಆದರ್ಶಸ್ವರೂಪವಾಗಿತ್ತು. ಯಾವನೇ ವ್ಯಕ್ತಿ ದೊಡ್ಡದನ್ನು ಬೋಧನೆ ಮಾಡಬೇಕಾದರೆ ಮೊದಲು ಆ ದೊಡ್ಡದನ್ನು ಬದುಕಬೇಕು ಎಂಬುದು ಅವರ ನಿಲುವಾಗಿತ್ತು.

ಆದ್ದರಿಂದಲೇ ವೇಷಧಾರಿಗಳಾದ ಡಾಂಭಿಕ ಗುರುಗಳ ಬಗ್ಗೆ ವಚನಕಾರರು ಖಂಡನೆಯ ಮಾತುಗಳನ್ನಾಡುತ್ತಾರೆ. ''ಕಂಥೆ ತೊಟ್ಟವ ಗುರುವಲ್ಲ'' ಅಲ್ಲಮನ ವಚನ ಗಮನಿಸಿ.

*''ನಡೆ-ನುಡಿ ಇಲ್ಲದ ಗುರುವ ಕಂಡು*
*ಉಪದೇಶ ಹಡೆಯಲೆಂದು ಹೋದರೆ*
*ಒಡನೆ ನುಡಿಯನು, ನುಡಿಸಿದರೆ ಕೇಳನು*
*ಕಡೆ-ಮೊದಲು ಕಾರ್ಯವೆಂತಪ್ಪುದೊ ಅಯ್ಯಾ?*
*ಮೂಗರ-ಮೂಗರ ಪ್ರಸಂಗದಂತೆ ಇದೆ*
*ಎನ್ನೊಳಗೆ ಅಜ್ಞಾನದ ಪರಿಮಳ...''*

ಅಲ್ಲಮನೇ ತನ್ನ ಇನ್ನೊಂದು ವಚನದಲ್ಲಿ –

*''ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯ*
*ಉಪಚಾರದ ಲಿಂಗ, ಉಪಚಾರದ ಜಂಗಮ*
*ಉಪಚಾರದ ಪ್ರಸಾದವ ಕೊಂಡ ಗುರುವಿಂಗೆ*
*ಭವದ ಲೆಂಕನಾಗಿ ಅಂಧಕನ ಕೈಯ ಅಂಧಕ ಹಿಡಿದಂತೆ*
*ಇವರಿಬ್ಬರೂ ಹೊಲಬುಗೆಟ್ಟರು ಕಾಣಾ ಗುಹೇಶ್ವರಾ''*

ಗುರುವಾದವರು ವಿದ್ಯಾರ್ಥಿಗಳಿಗೆ ಕಲಿಸಬೇಕಾದದ್ದು ಕೇವಲ ವಾಕ್ಚಾತುರ್ಯವಲ್ಲ, ಅವರು ಮಾಡುವ ಬೋಧನೆ ಮನಸ್ಸಿನ ಪರಿಪಕ್ವತೆಗೆ ಕಾರಣವಾಗಬೇಕು. ಇದನ್ನೇ ಬಸವಣ್ಣ ಹೀಗೆ ಹೇಳಿದ್ದಾನೆ – ''ಓದಿಸುವಣ್ಣಗಳಿನ್ನ ಮಾತಾಡ ಕಲಿಸಿದರಲ್ಲದೆ ಮನಕ್ಕೆ ಮಾತಾಡ ಕಲಿಸಲಿಲ್ಲವಯ್ಯ'', ಅಂದರೆ ವ್ಯಕ್ತಿಗಳ ಮನಸ್ಸಿನಲ್ಲಿ ಮೂಲಭೂತವಾದ ಬದಲಾವಣೆ ಆಗಬೇಕು. ಈ ಬದಲಾವಣೆಯನ್ನು 'ಗುರು' ಕಾಣಿಸಬೇಕು. ಇಷ್ಟೇ ಸಾಲದು. ಇದಕ್ಕೆ 'ಶಿಷ್ಯ'ನಾದವನು ಯೋಗ್ಯನಾಗಿರಬೇಕು. ಇವರಿಬ್ಬರ ನಡುವಿನ ಮಾನವೀಯ ಸಂಬಂಧದಿಂದ ಇದು ಸಾಧ್ಯ ಎಂದು ವಚನಕಾರರು ನಂಬಿದ್ದಾರೆ.

ಶ್ರೇಷ್ಠ ವಿಷಯಗಳನ್ನು ಓದಬಹುದು. ಆದರೆ ಅದನ್ನು ಅನುಭವವನ್ನಾಗಿ ಮಾರ್ಪಡಿಸಿಕೊಳ್ಳುವುದು ಮುಖ್ಯ. ಅದನ್ನು ಅನುಭವವನ್ನಾಗಿಸಿಕೊಳ್ಳುವ ದಾರಿಯನ್ನು ಗುರುವಾದವನು ತೋರಿಸಬೇಕು – ಎಂದು ಸಿದ್ಧರಾಮ ನುಡಿದಿದ್ದಾನೆ.

ನಮ್ಮ ಆಧುನಿಕ ಅಧ್ಯಯನದ ಕ್ರಮದಲ್ಲಿ ಕಲಿಯುವುದೆಂದರೆ 'ಮಾಹಿತಿ'ಯನ್ನು ಪಡೆದುಕೊಳ್ಳುವುದು ಎಂಬಂತಾಗಿದೆ. ಯಾರು ಮಾಹಿತಿಯನ್ನು ಹೆಚ್ಚಾಗಿ ಒದಗಿಸುತ್ತಾರೊ ಅವರು ನಿಜವಾದ 'ಗುರು' ಎಂದುಕೊಳ್ಳುತ್ತೇವೆ. ಆದರೆ ವಚನಕಾರರಿಗೆ ಗುರು ಎಂದರೆ ಕೇವಲ ಮಾಹಿತಿ ಒದಗಿಸುವವರಲ್ಲ, ನಾನು ಈ ಮೊದಲೇ ಹೇಳಿದಂತೆ ಅಂತರಂಗದ ಬದಲಾವಣೆಗೆ ಕಾರಣವಾಗುವಂಥವರು.

ಕೆಲವರು ಮಹಾನ್ ಗುರುಗಳಿರುತ್ತಾರೆ. ಸರಳತೆ, ಸಜ್ಜನಿಕೆ, ನಿರಹಂಕಾರ, ವಿಶಾಲಹೃದಯ, ಕ್ರಿಯಾಶೀಲತೆ, ನಿರಂತರ ಧ್ಯಾನ, ಪ್ರತಿಭೆ, ಎಲ್ಲವೂ ಅವರಲ್ಲಿರುತ್ತಿತ್ತು. ಒಂದೇ ವ್ಯಕ್ತಿತ್ವ ಇದನ್ನೆಲ್ಲ ಅಂತರ್ಗತಗೊಳಿಸಿಕೊಂಡಿರುತ್ತಿತ್ತು. ಇಂದು ಇಂಥ ವ್ಯಕ್ತಿತ್ವ ಅಪರೂಪ. ಸಜ್ಜನಿಕೆ ಇದ್ದರೆ ಪ್ರತಿಭೆ ಇರುವುದಿಲ್ಲ, ಪ್ರತಿಭೆ ಇದ್ದರೆ ಕ್ರಿಯಾಶೀಲತೆ ಇರುವುದಿಲ್ಲ, ಕ್ರಿಯಾಶೀಲತೆ ಇದ್ದರೆ ವಿಶಾಲ ಮನಸ್ಸು ಇರುವುದಿಲ್ಲ. ಇದು ಕೇವಲ ಗುರುವಿಗೆ ಸಂಬಂಧಪಟ್ಟ ಪ್ರಶ್ನೆಮಾತ್ರವಲ್ಲ, ನಮ್ಮ-ನಿಮ್ಮೆಲ್ಲರಿಗೂ ಸಂಬಂಧಿಸಿದ ಪ್ರಶ್ನೆಯೂ ಹೌದು. ಇದೆಲ್ಲವನ್ನು ಒಂದೇ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳುವುದು ಹೇಗೆ ಎನ್ನುವುದು ನಮ್ಮೆದುರಿನ ದೊಡ್ಡ ಸವಾಲಾಗಿದೆ. ವಚನಕಾರರು ಕೂಡ ಈ ಕುರಿತು ಗಂಭೀರವಾಗಿ ಆಲೋಚಿಸಿದ್ದಾರೆ. ಇದಕ್ಕೆ ಅವರು ಕಂಡುಕೊಂಡ ಪರಿಹಾರವೇನೆಂದರೆ ''ನೈತಿಕ ಎಚ್ಚರ''. ಈ ನೈತಿಕ ಎಚ್ಚರ ಮಾತ್ರ ಒಂದು ಘನವಾದ ವ್ಯಕ್ತಿತ್ವದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಈ ನೈತಿಕ ಎಚ್ಚರ ನಮ್ಮ ಶೀಲಕ್ಕೆ ಸಂಬಂಧಪಟ್ಟ ಪ್ರಶ್ನೆ ಮಾತ್ರವಲ್ಲ, ನಮ್ಮ ಕ್ರಿಯೆಯ ಪ್ರಾಮಾಣಿಕತೆಗೆ ಸಂಬಂಧಿಸಿದ ಪ್ರಶ್ನೆಯೂ ಹೌದು. ಯಾವ ಕ್ರಿಯೆಯ ವಿಧಾನ ಮತ್ತು ಉದ್ದೇಶ ಪ್ರಾಮಾಣಿಕವಾಗಿರುವುದಿಲ್ಲವೋ ಅದರ ಪರಿಣಾಮಗಳು ದುರಂತಕ್ಕೆ ಆಸ್ಪದಮಾಡಿಕೊಡುತ್ತವೆ. ವಚನಕಾರರು 'ಗುರು'ವಿನ ವ್ಯಕ್ತಿತ್ವದಲ್ಲಿರುವ ಅಪ್ರಾಮಾಣಿಕತೆಯನ್ನು ಖಂಡಿಸುತ್ತಾರೆ. ಅಂಬಿಗರ ಚೌಡಯ್ಯ ಈ ಕುರಿತು ಬಹಳ ನಿಷ್ಠುರವಾದ ಮಾತುಗಳನ್ನಾಡುತ್ತಾನೆ.





ವಚನಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಗುರು-ಶಿಷ್ಯರ ಸಂಬಂಧ ಕುರುಡು ನಂಬಿಕೆಯದ್ದಲ್ಲ, ವಿವೇಕದಿಂದ ಕೂಡಿದ್ದಾಗಿದೆ. ಯಾವ ವಚನಕಾರ ಕೂಡ ಮೂಢತೆಯಿಂದ ಗುರುವನ್ನು ಹಿಂಬಾಲಿಸಲು ಹೇಳುವುದಿಲ್ಲ. ''ಗುರು-ಶಿಷ್ಯರ ಸಂಬಂಧವು ಆಮೆ ಮತ್ತದರ ಚಿಪ್ಪಿನಂತೆ, ಬೀಜ ತೆಗೆದ ಹತ್ತಿ-ಬೆಂಕಿಗಳ ಸಂಬಂಧದಂತೆ, ನೀರು-ನೀರಿನಲ್ಲಿ ಬೆರೆತಂತೆ, ಲೆಕ್ಕಣಿಕೆಯಲ್ಲಡಗಿರುವ ಚಿತ್ರರಚನಾ ಶಕ್ತಿಯಂತೆ ಇರಬೇಕೇ ಹೊರತು ಒಡೆದ ಮಡಕೆಯಲ್ಲಿ ಅಮೃತವನ್ನು ತುಂಬಿದಂತೆ ವ್ಯರ್ಥವಾಗಬಾರದು'' – ಎಂದು ಮಾರಯ್ಯಾ ಹೇಳಿದ್ದಾನೆ.

ಗುರುವಿನ ಜೊತೆ ನಾವು ಹೇಗೆ ಮುಖಾಮುಖಿಯಾಗಬೇಕು ಎನ್ನುವುದರ ಬಗೆಗೆ ಅಲ್ಲಮ ಮುಖ್ಯ ಸುಳುವೊಂದನ್ನು ನೀಡಿದ್ದಾನೆ –

*''ಹೃದಯ ಕಮಲ ಮಧ್ಯದಲ್ಲಿ ಗುರುವನರಿದು ಪೂಜಿಸಿ*
*ಗುರುಮಿಥ್ಯಾತನೆಂಬುದು ನಾನರಿದೆನಯ್ಯಾ''*

ಗುರುವಿನ ಮಹತ್ವ ಅರಿಯಬೇಕಾದರೆ ಹೃದಯದಿಂದ ತೀವ್ರವಾಗಿ ಅವರ ವ್ಯಕ್ತಿತ್ವಕ್ಕೆ ಸ್ಪಂದಿಸಬೇಕು. ಕಾಟಾಚಾರಕ್ಕಾಗಿ ಅವರ ಬೋಧನೆ ಕೇಳಿದರೆ ಅದರಿಂದ ಏನೂ ದಕ್ಕುವುದಿಲ್ಲವೆಂದು ಅಲ್ಲಮ ಅಭಿಪ್ರಾಯಪಟ್ಟಿದ್ದಾನೆ.

ವಚನ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಗುರುವಿನ ಸ್ವರೂಪವನ್ನು ಹೀಗೆ ಪಟ್ಟಿಮಾಡಬಹುದೆನಿಸುತ್ತದೆ –

೧. ಗುರುವಿಗೆ ವಿದ್ವತ್ತೆಯಿಂದ ಹುಟ್ಟಿಸಬಹುದಾದ ಅರಿವು ಮುಖ್ಯವಾಗಬೇಕೆ ಹೊರತು ಬಾಹ್ಯ ಆಚರಣೆಗಳಲ್ಲ.
೨. ''ನೈತಿಕ ಎಚ್ಚರ'' ಗುರುವಿನ ವ್ಯಕ್ತಿತ್ವವನ್ನು ರೂಪಿಸಿರಬೇಕು.
೪. ಗುರುವಿನ ಉದ್ದೇಶ ನಿಸ್ವಾರ್ಥದ್ದಾಗಿರಬೇಕು. ಹಣ-ಕೀರ್ತಿ-ಸ್ವಾರ್ಥ ಅಭಿಲಾಷೆಗಳಿಂದ ಕೂಡಿರಬಾರದು.
೫. ಗುರುವಿನ ಕ್ರಿಯೆ ಸಹಜ ಪ್ರೇಮದಿಂದ ಕೂಡಿರಬೇಕು.

ಬಹಳ ಮಹತ್ವದ ಸಂಗತಿ ಏನೆಂದರೆ ವಚನಸಾಹಿತ್ಯದಲ್ಲಿ ಗುರುವಿನ ಸ್ವರೂಪ ಒಂದೇ ಬಗೆಯಾಗಿಲ್ಲ, ಒಬ್ಬೊಬ್ಬ ವಚನಕಾರ ಒಂದೊಂದು ರೀತಿಯಲ್ಲಿ ಗುರುವಿನ ಸ್ವರೂಪವನ್ನು ಕಂಡುಕೊಂಡಿದ್ದಾರೆ. ಅಂಬಿಗರ ಚೌಡಯ್ಯ, ಚನ್ನಬಸವಣ್ಣ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮ ಒಬ್ಬೊಬ್ಬರದು ಒಂದೊಂದು ವಿಧಾನ.

ಅಲ್ಲಮ ಎಲ್ಲರಿಗಿಂತ ಭಿನ್ನವಾಗಿ ನಿಲ್ಲುತ್ತಾನೆ. ಈತನ ದೃಷ್ಟಿಯಲ್ಲಿ ''ಗುರು'' ವ್ಯಕ್ತಿಯ ರೂಪದಲ್ಲಿರಲು ಸಾಧ್ಯವೇ ಇಲ್ಲ. ಅವನಿಗೆ ಗುರು ಎನ್ನುವುದೊಂದು ತತ್ವ ಅದನ್ನು ಪ್ರತಿಯೊಬ್ಬ ವ್ಯಕ್ತಿ ತನ್ನೊಳಗೆ ಕಾಣಬೇಕು. ಅಂದರೆ ಅದು ಒಳ ಅರಿವು.

'ಅರಿವು' ಎಂದರೆ ಲೋಕಮಾಹಿತಿ, ಭೌತಿಕಜ್ಞಾನ, ಎಂಬ ಅರ್ಥಗಳಿಗಷ್ಟೇ ಅಲ್ಲಮ ಸೀಮಿತಗೊಳಿಸಲಿಲ್ಲ. ಅರಿವು ಎಂದರೆ ವಿಶಿಷ್ಟ ಎಚ್ಚರದ, ಉತ್ತುಂಗ ನಿಲುವಿನ, ಸಮದೃಷ್ಟಿಯ ಆತ್ಮದ ನಿಲುವು ಎಂಬಂತೆ ಅದನ್ನು ಅರ್ಥೈಸಿದ್ದಾನೆ. ಯಾವ ಗುರುವನ್ನು ಚನ್ನಬಸವಣ್ಣ ಬಾಹ್ಯದಲ್ಲಿ ಕಟ್ಟಲಿಕ್ಕೆ ಪ್ರಯತ್ನಿಸಿದನೋ ಆ ಗುರುವನ್ನು ಅಲ್ಲಮ ಪ್ರತಿಯೊಬ್ಬ ವ್ಯಕ್ತಿಯ ಒಳಗೆ ಕಟ್ಟಲು ಯತ್ನಿಸಿದ. ಅವನ ವಚನ ಇದನ್ನೇ ಹೇಳುತ್ತಿದೆ ನೋಡಿ.

*''ಗುರು-ಶಿಷ್ಯ ಸಂಬಂಧವನಱಸಲೆಂದು ಹೋದರೆ*
*ತಾನೆ ಗುರುವಾದ*
*ತಾನೆ ಶಿಷ್ಯನಾದ*
*ತಾನೆ ಲಿಂಗವಾದ*
*ಗುಹೇಶ್ವರ''*

ಮುಕ್ತಾಯಕ್ಕ ಕೂಡ ''ಅರಿವೇ ಗುರು'' ಎಂದು ನಂಬುತ್ತಾಳೆ.

### ಸಮಾರೋಪ

ವಚನಸಾಹಿತ್ಯದಲ್ಲಿಯ ಗುರುವಿನ ಸ್ವರೂಪವನ್ನು ಒಟ್ಟಾರೆಯಾಗಿ ಎರಡು ವಿಧಗಳಲ್ಲಿ ವಿಂಗಡಿಸಬಹುದೆನಿಸುತ್ತದೆ. ಒಂದು – ಕುರುಹಿನ (ಲಾಂಛನ) ಬೆನ್ನುಹತ್ತಿದವರು. ಎರಡು – ಅರಿವಿನ ಬೆನ್ನು ಹತ್ತಿದವರು.

ಬೇರೆ ಧರ್ಮಗಳ ಒತ್ತಡದಲ್ಲಿ ಕುರುಹಿನ ಬೆನ್ನುಹತ್ತುವುದರ ಮೂಲಕ ತಮ್ಮ ಧರ್ಮದ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ವಚನಕಾರರಿಗೆ ಅನಿವಾರ್ಯವಾಗಿತ್ತು. ಜೊತೆಗೆ ಇದು ಬರೀ ಕುರುಹುಗಳೆಲ್ಲ ಉಳಿದರೆ ಕಷ್ಟ ಎಂದುಕೊಂಡು ಅರಿವಿನ ಬೆನ್ನು ಹತ್ತಿದರು.

ಈ ಎರಡು ಸ್ವರೂಪಗಳಲ್ಲಿ ಅರಿವಿನ ಬೆನ್ನುಹತ್ತಿದ ಗುರು ಮತ್ತು ಈ ಅರಿವಿನ ಮೂಲಕ ಸಮಾಜವನ್ನು ಬೆಳಗುವ ಗುರುವಿನ ಸ್ವರೂಪವಿದೆಯಲ್ಲಾ ಅದೇ ನಮಗೆ ಮಾದರಿಯಾಗಬೇಕು. ಹೀಗಾದಾಗ ಮಾತ್ರ ಸಕಲ ಜೀವರಾಶಿಗಳಿಗೆ ಲೇಸನ್ನು ಬಯಸಿದ ವಚನ ಸಾಹಿತ್ಯದ ಉದ್ದೇಶ ಸಾರ್ಥಕವಾಗುತ್ತದೆ.

★

# ಆಸೆ-ದುರಾಸೆ

– ಹುಲಿಕಲ್ ನಾಗರಾಜ್
೧೦೪, ಹಳೇ ತಿಪ್ಪಸಂದ್ರ,
ಎಚ್.ಎ.ಎಲ್ ೨ನೇ ಹಂತ
ಬೆಂಗಳೂರು – ೫೬೦ ೦೦೮.

*ಇಚ್ಛತಿ ಶತೀ ಸಹಸ್ರ, ಸಹಸ್ರೀ ಲಕ್ಷಮೀಯತೆ*
*ಲಕ್ಷಾಧಿಪಸ್ತಥಾ ರಾಜ್ಯಂ ರಾಜ್ಯಸ್ಥಃ ಸ್ವರ್ಗಮೀಯತೆ*

ಎನ್ನುತ್ತದೆ ಪಂಚತಂತ್ರದ ಸುಭಾಷಿತ ವಾಕ್ಯ.

**ನೂ**ರುಳ್ಳವನು ಸಾವಿರವನ್ನು, ಸಾವಿರವುಳ್ಳವನು ಲಕ್ಷವನ್ನು; ಲಕ್ಷಾಧಿಪನು ರಾಜ್ಯವನ್ನು, ರಾಜ್ಯವುಳ್ಳವನು ಸ್ವರ್ಗವನ್ನೂ ಮೇಲೆ ಮೇಲೆ ಬಯಸುತ್ತಾನೆ. ಆಸೆಯ ಭೂತ ಹಿಡಿದಿರುವವರನ್ನು ಕುರಿತು ಬರೆದ ಈ ವಾಕ್ಯ ಆಶಾ ಪಿಶಾಚಿಗಳ ಕಣ್ಣು ತೆರೆಸುವಂತಿದೆ.

''ಆಶಾಸಮಂ ನಾಸ್ತಿ ದುಃಖಃ'' ಎಂಬ ಮಾತೊಂದಿದೆ. ಅಂದರೆ ಆಸೆಗೆ ಸಮನಾದ ದುಃಖ ಬೇರೊಂದಿಲ್ಲ. ಆಸೆಯೇ ಇಲ್ಲದಿದ್ದರೆ ಮನುಷ್ಯ ಬದುಕುವುದು ಹೇಗೆ? ಆಸೆಯೇ ಇಲ್ಲದಿದ್ದರೆ ನಮ್ಮ ಜೀವನಕ್ಕೆ ಅರ್ಥವಿರುವುದಿಲ್ಲ, ಬಾಳು ಬರಡಾಗಿ ಜೀವನ ರಥ ತನ್ನ ಪಥವನ್ನು ಬದಲಾಯಿಸುತ್ತದೆ. ಆಸೆ ಇರುವುದು ಸಹಜ. ಆದರೆ ದುರಾಸೆಯಲ್ಲ. ಓದಿ ಸಾಧನೆ ಮಾಡಿ ಸಾಧಕನಾಗುವ ಆಸೆ ವಿದ್ಯಾರ್ಥಿಗಳಿಗಿದ್ದರೆ ತಪ್ಪಲ್ಲ. ಕಲಾಸೇವೆಯಿಂದ ಉತ್ತಮ ಮಟ್ಟದ ಕಲಾವಿದನಾದರೆ ತಪ್ಪಲ್ಲ. ತ್ಯಾಗಮೂರ್ತಿಗಳಾಗಿ ಸಮಾಜಸೇವೆಗೆ ತೊಡಗಿಸಿಕೊಂಡು ಖ್ಯಾತನಾಮರಾಗುವ ಬಯಕೆ ಅಂಕುರಿಸಿದರೆ ಅದೂ ತಪ್ಪಲ್ಲ. ಶ್ರಮಪಡದೆ ಅನಾಯಾಸವಾಗಿ ಶ್ರೀಮಂತನಾಗ ಬೇಕೆಂಬ ಬಯಕೆ, ಓದದೆಯೇ ಪದವಿ ಪ್ರಶಸ್ತಿಗಳಿಸುವ ಆಸೆ, ಅಧಿಕಾರದ ಭೂತದ ನೆರಳಿನಡಿಯಲ್ಲಿ ಅನ್ಯಾಯವೆಸಗುತ್ತಾ ಸಮಾಜ ಕಂಟಕನಾಗಿ ಬಾಳುವ ಆಸೆ ಇದು ದುರಾಸೆ.

**ಆ**ಸೆಗಾಗಲಿ, ದುರಾಸೆಗಾಗಲೀ ದಾಸನಾದವನು ಈ ವರ್ತುಲದಿಂದ ಹೊರಬರಲು ಸಾಧ್ಯವಿಲ್ಲ. ಆಸೆಯನ್ನು ತನ್ನ ಆಳಿನಂತೆ ಮಾಡಿಕೊಂಡವನು ಮಾತ್ರ ಈ ಪ್ರಪಂಚವನ್ನಾಳಲು ಸಮರ್ಥನು. ಆಸೆ ಎಂಬುದು ಬೆಂಬಿಡದ ಭೂತ. ಆಸೆಯ ಪಾಶದಿಂದ ಬಂಧಿತರಾದವರನ್ನು ಪುರಾಣ ಇತಿಹಾಸವಲ್ಲದೆ ಸಾಮಾಜಿಕ ಜೀವನದಲ್ಲೂ ಕಂಡಿದ್ದೇವೆ. ಅಶಾಶ್ವತವಾದ ಆರಡಿಯ ಶರೀರದಲ್ಲಿ ಆಕಾಶದಷ್ಟು ಆಸೆಗಳನ್ನು ಹೊತ್ತು ಪೂರ್ಣಮಾಡಲು ಸಾಧ್ಯವಾಗದೆ ನಿರಾಶರಾಗುವುದನ್ನು ಕಾಣುತ್ತಿದ್ದೇವೆ.

**ಈ** ಯುಗದ ಸಂತ ಶ್ರೇಷ್ಠರಾದ ಶ್ರೀರಾಮಕೃಷ್ಣ ಪರಮಹಂಸರು ಹೇಳುವ ಒಂದು ದೃಷ್ಟಾಂತದ ಮೂಲಕ ನಮ್ಮ ಅಂತರಂಗದ ಕಣ್ಣನ್ನು ತೆರೆಯಿಸಲು ಪ್ರಯತ್ನಿಸಿದ್ದಾರೆ.

**ಒಂ**ದು ಇರುವೆ ಸಕ್ಕರೆಯ ಬೆಟ್ಟದ ಬಳಿ ಬಂದು, ಸಕ್ಕರೆಯನ್ನು ತಿಂದು ಆ ಬೆಟ್ಟವನ್ನೇ ತನ್ನ ಗೂಡಿನ ಬಳಿ ಸಾಗಿಸಬೇಕೆಂದು ಬಯಸಿತಂತೆ! ಆದರೆ ಇರುವೆಗೆ ಈ ಬದುಕು ಎಷ್ಟೊಂದು ಅಸ್ಥಿರ ಎಂಬುದು ಗೊತ್ತಿಲ್ಲ. ಇರುವೆಗೂ ಆಸೆಯುಂಟು. ಆಸೆಯನ್ನು ಪೂರೈಸುವಲ್ಲಿ ನಾವೆಷ್ಟು ಸಮರ್ಥರೆಂದು ಪ್ರಶ್ನಿಸಿಕೊಳ್ಳಬೇಕಾಗುತ್ತದೆ. ಇದು ದುರಾಸೆಯ ಯೋಚನೆ. ಇಂಥಹ ಯೋಚನೆಗೆ ಕಡಿವಾಣ ಹಾಕುವುದು ಸಮಂಜಸ. ಸಂತ ತಿರುವಳ್ಳುವರ್‌ರವರು ತಮ್ಮ ತಿರುಕ್ಕುರುಳ್‌ನಲಿ –

*ಆಸೆಯನೊಬ್ಬ ಕಳೆಯಲು ಮೋಕ್ಷ ಸುಖವದು*
*ತಾನು ಬಯಸಿದೊಲು ಬರುವುದು*
*(ಕನ್ನಡಾನುವಾದ, ಅಧ್ಯಾಯ ೩೭-೩೬೭)*

**ಅ**ರ್ಥಾತ್, ಒಬ್ಬನು ಆಸೆಯನ್ನು ಸಂಪೂರ್ಣವಾಗಿ ನಾಶಮಾಡಿಬಿಟ್ಟರೆ, ಅವನು ಬಯಸಿದಂತೆ ಮೋಕ್ಷ ಸುಖವನ್ನು (ಸಮಷ್ಟಿ ಜೀವನದ ಸೌಖ್ಯವನ್ನು) ಹೊಂದುವನು.

**ಆ**ಸೆ, ದುರಾಶೆಯಾಗಿ ಅದರಿಂದ ಎಂದಿಗೂ ತೃಪ್ತಿ ದೊರೆಯದೆಂಬುದನ್ನು ಬಸವಣ್ಣನವರು ತಮ್ಮ ವಚನವೊಂದರಲ್ಲಿ ಅಭಿವ್ಯಕ್ತಿಪಡಿಸಿದ್ದಾರೆ.

*ಹಾವಿನ ಬಾಯಕಪ್ಪೆ ಹಸಿದು ಹಾರುವ ನೊಣಕೆ ಆಸೆಮಾಡುವಂತೆ*
*ಶೂಲವನೇರುವ ಕಳ್ಳನು ಹಾಲುತುಪ್ಪದ ಕುಡಿದು ಮೇಲೇಸುಕಾಲ ಬದುಕುವನೋ?*
*ಕೆಡುವೊಡಲನೆಚ್ಚಿ ಕಡುಹುಸಿಯನೆ ಹುಸಿದು ಒಡಲ ಹೊರೆಯುವವರ*
*ಕೂಡಲಸಂಗಮದೇವನು ಅವರನ್ನೊಲ್ಲ ಕಾಣಿರಣ್ಣಾ.*

**ಹಾ**ವಿನ ಬಾಯಲ್ಲಿ ಕಪ್ಪೆ ಆಹಾರವಾಗಿ ಸಿಕ್ಕಿಕೊಂಡಿದೆ. ಕಪ್ಪೆಗೆ ಹಸಿವಾಗಿ ಹಾರಾಡುವ ನೊಣಕ್ಕೆ ಬಾಯ್ತೆರೆಯುತ್ತಿದೆ. ನಮ್ಮ ಜೀವ ಕಪ್ಪೆಯಂತಾಗಿ ಆಸೆಗೆ ಮಿತಿಯೇ ಇಲ್ಲ. ಆಸೆಯ ಸಸಿ ಹೆಮ್ಮರವಾಗಿ ಬೆಳೆಯುತ್ತಲೇ ಇದೆ. ಆಸೆ ಅತಿಯಾದರೆ ಆಪತ್ತು; ಮಿತವಾದರೆ ಸಂಪತ್ತು.

**ವ್ಯ**ಕ್ತಿ ಕುಟುಂಬ ರಕ್ಷಣೆಯ ಕರ್ತವ್ಯವನ್ನು ನಿರ್ವಹಿಸಲೇ ಬೇಕಲ್ಲವೇ? ತನ್ನ ಇತಿ ಮಿತಿಗೆ ಮೀರಿದ ಭೋಗದ ಬದುಕಿಗೆ ಹಾತೊರೆಯುವುದನ್ನು ಬಿಟ್ಟು ಕಾಲ, ದೇಶ, ಪರಿಸ್ಥಿತಿಗೆ ತಕ್ಕಂತೆ ಸರಳತನವನ್ನು ಮೈಗೂಡಿಸಿಕೊಂಡು ಬದುಕಿನ ಸುಖ ಕಾಣುವುದು ನಮ್ಮ ಕೈಯಲ್ಲಿಯೇ ಇದೆ. ಅದೇ ಸಾರ್ಥಕ ಜೀವನ.

★







# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು
ಸಹಾಯಕ ಪ್ರಾಧ್ಯಾಪಕರು,
ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ಧಗಂಗಾ ಕ್ಷೇತ್ರ

ಭಾಗ-೪

ಸಿದ್ದೇಶ್ವರ ಪುರಾಣದ ನಾಲ್ಕನೆಯ ಸಂಧಿಯಲ್ಲಿ – ಸ್ಥಾವರ ಲಿಂಗಕ್ಕಿಂತಲೂ ಚರಲಿಂಗವೇ ಶ್ರೇಷ್ಠವಾದುದು; ಆದುದರಿಂದಲೇ ಚರಪ್ರಸಾದವನ್ನು ಸ್ಥಾವರಲಿಂಗಕ್ಕೆ ಕೊಡುವುದು ಮತ್ತು ಚರ ಪಾದೋದಕದಿಂದ ಸ್ಥಾವರಲಿಂಗಕ್ಕೆ ಅಭಿಷೇಕ ಮಾಡುವುದು ಎಂಬ ಸಿದ್ಧಾಂತವು ಪ್ರಮಾಣಪೂರ್ವಕವಾಗಿ ಸ್ಥಾಪಿಸಲ್ಪಟ್ಟಿದೆ. ತತ್ಪರವಾದ ಮೂರು ಪವಾಡಗಳೂ ನಿರೂಪಿತವಾಗಿವೆ.

*ಪವಾಡ : ೧*
*ತ್ರಿಯಂಬಕೇಶನ ನುಡಿಸಿದುದು*

ಪಾವನಾತ್ಮನಾದ ಪರಮಶಿವಯೋಗಿ ಶ್ರೀ ಸಿದ್ಧಲಿಂಗೇಶ್ವರರು ಅಖಿಲ ಜೀವರನ್ನು ಸಲಹುತ್ತಾ ಒಲವಿಂದೆ ಗೋದಾವರೀ ನದಿಯ ತೀರಕ್ಕೆ ಬರುತ್ತಾರೆ. ಅದು ಪೂಜಾ ಸಮಯವಾದ್ದರಿಂದ ಶಿವಲಿಂಗ ಪೂಜೆ ಯನ್ನು ಮಾಡಿ ತೀವಿದಾನಂದದಲ್ಲಿರುತ್ತಾರೆ. ಆ ಸಂಧ್ಯಾ ಸಮಯದಲ್ಲಿ ಸಂಧ್ಯಾವಂದನೆ ಮಾಡಲು ಅನೇಕ ಬ್ರಾಹ್ಮಣೋತ್ತಮರು ಬಂದು ಗೋದಾವರಿಯಲ್ಲಿ ಸಂಧ್ಯಾವಂದನೆಯನ್ನು ನಿರ್ವಹಿಸಿ ಶಿವಯೋಗಿಯ ಶಿವತೇಜಸ್ಸಿನಿಂದಾಕರ್ಷಿತರಾಗಿ ಸನ್ನಿಧಿಗೆ ಬರುತ್ತಾರೆ. ಬಂದ ಆ ಭೂಸುರರು ಯೋಗಿಗೆ ಕೈಮುಗಿದು ಲೇಸಾಗಿ ಕುಳಿತು ಹೀಗೆ ಪ್ರಸಂಗ ಮಾಡುತ್ತಾರೆ, 'ಭಾಸುರಾಂಗ ಯತೀಂದ್ರರು ನೀವು ಸಾಕ್ಷಾತ್ ಪರಶಿವನಂತೆ ಕಾಣುತ್ತಿರುವಿರಿ. ಯಾವ ದೇಶದಿಂದ ಬಂದಿರಿ. ಶಿವಯೋಗಿಗಳಾದ ನೀವು ಆಚರಿಸುವ ಲಿಂಗಾರ್ಚನೆ ಕ್ರಮವು ವೇದೋಕ್ತವೆನಿಸಿ ವಿಹಿತವಾಗಿದೆ. ಆದರೆ ''ನೀವು ಭುಂಜಿಸಿ ಮಿಕ್ಕ ಶೇಷವನ್ನು ಲಿಂಗಕ್ಕೆ ಕೊಡುವುದು ಸರಿಯಲ್ಲ'' (ಲಿಂಗದೇವಂಗೆ ನೀವು ಭುಂಜಿಸಿ ಮಿಕ್ಕ ಶೇಷಮಂ ಕುಡುತಿರ್ಪಿದಿದು ಸಲ್ಲದು) ಎಂದು ಆಕ್ಷೇಪಿಸುತ್ತಾರೆ. ಆಗ ಅದಕ್ಕೆ ಉತ್ತರವಾಗಿ ಶ್ರೀ ಸಿದ್ಧಲಿಂಗೇಶ್ವರರು ಜಂಗಮಾಚರಣೆಯ ಮಾರ್ಗವನ್ನು ಆಗಮ ಪುರಾಣಗಳ ಪ್ರಮಾಣಗಳಾಧಾರಗಳ ಸಹಿತ ನಿರೂಪಿಸುತ್ತಾರೆ.

*ಎಲೈ ದ್ವಿಜರಿರಾ!*

''ಲಿಂಗರೂಪಿಯಾದ ನಾನೇ (ಪರಶಿವನೇ) ಎರಡು ರೂಪಿನಿಂದ ಪ್ರಕಾಶಿಸುತ್ತೇನೆ. ಒಂದು ಸ್ಥಾವರ ಇನ್ನೊಂದು ಚರರೂಪು. ಮಂತ್ರಸಂಸ್ಕಾರ ನಿರಂತವಾಗಿದ್ದರೆ ಮಾತ್ರ ನಾನು ಸ್ಥಾವರದಲ್ಲಿ ನೆಲಸಿರುತ್ತೇನೆ. ಆದರೆ ಚರದಲ್ಲಿ (ಜಂಗಮನಲ್ಲಿ) ಸದಾ ಇರುತ್ತೇನೆ. ಆದ್ದರಿಂದ ಸ್ಥಾವರಕ್ಕಿಂತ ಜಂಗಮವೇ ದೊಡ್ಡದು. ಚರಲಿಂಗದ ಸುಪ್ರಸಾದವಿಲ್ಲದೆ ನನ್ನನ್ನು ಕೋಟಿ ಜನ್ಮಗಳು ಪೂಜಿಸಿದರೂ ಮೋಕ್ಷವಿಲ್ಲ. ಚರಪಾದೋಕವಿಲ್ಲದೆ ಮಾಡಿದ ಅಭಿಷೇಕ ಹೆಣಕ್ಕೆ ಮಾಡಿದ ಶೃಂಗಾರವಿದ್ದಂತೆ, ಲಿಂಗಪ್ರಸಾದವು ಸಕಲ ರೂಪವಾದದ್ದು. ಅದರಲ್ಲಿ ಫಲಪದವಿಗಳುಂಟು. ಅದರಿಂದ ಭವವುಂಟು. ಜಂಗಮ ಪ್ರಸಾದ ನಿಷ್ಕಲರೂಪವಾದದ್ದು. ಅದರಲ್ಲಿ ಫಲಪದವಿಗಳಿಲ್ಲ. ಅದರಿಂದ ಭವಾಬ್ಧಿಯೂ ಇಲ್ಲ. ಅದು ಕಾರಣ ಅನುದಿನವೂ ಲಿಂಗಕ್ಕೆ ಜಂಗಮ ಪ್ರಸಾದವನ್ನು ಲಿಂಗಕ್ಕೆ ಕೊಟ್ಟುಕೊಂಬುದು'' ಹೀಗೆಂದು ಲಲಿತಭೈರವಿ ಎಂಬ ಆಗಮದಲ್ಲಿ ಹೇಳಿರುವ ಶಿವನ ವಾಕ್ಯಗಳನ್ನು ಕೇಳಿರಿ.



*ಎಲೈ ದ್ವಿಜೋತ್ತಮರೆ!*

''ವ್ರತಗಳೆಲ್ಲೆಲ್ಲಾ ಜಂಗಮಪೂಜೆಯೇ ಮುಖ್ಯವೂ ಅತಿಶಯವೂ ಕೇಡಿಲ್ಲದುದೂ ಆಗಿದೆ. ಅದಕ್ಕಿಂತಲೂ ಜಂಗಮದ ದರ್ಶನ ಅಧಿಕವಾದುದು. ಆದ್ದರಿಂದ ಅಂಥ ಜಂಗಮದ ಪಾದೋಕದಿಂದ ನಾನು ಸ್ನಾನಮಾಡುತ್ತೇನೆ. ಅದರ ಸುಪ್ರಸಾದವನು ಸೇವಿಸುತ್ತೇನೆ. ಜಂಗಮಕ್ಕೆ ಸಮಸ್ತ ವಸ್ತುಗಳನ್ನು ಅರ್ಪಿಸಿ ಬಳಿಕ ಚರಶೇಷಕ್ಕೆ ನಮಿಸಿ ಭೋಜನ ಗೈಯ್ವುದು. ಲಿಂಗಕ್ಕೆ ಕೊಟ್ಟುಕೊಂಬುದೇ ಮುಖ್ಯ. ಆತನೇ ಲಿಂಗಾಂಗಿಯೆನಿಸಿ ನಿತ್ಯತ್ವವನ್ನು ಪಡೆಯುವನು. ಜಂಗಮವೇ ನನಗೆ ಜೀವ. ಜಂಗಮವೇ ನನಗೆ ನೆಲೆ. ನನಗಾಲಿ ಲಿಂಗಕ್ಕಾಗಲೀ ಜಂಗಮ ಪಾದೋಕದಿಂದ ಅಭಿಷೇಕವನ್ನು ಮಾಡುವುದು. ಅದರ ಪ್ರಸಾದವನ್ನರ್ಪಿಸುವುದು. ಜಂಗಮ ಸುಪ್ರಸಾದವೇ ಲಿಂಗದ ಚೈತನ್ಯಕಳೆ ಅದಿಲ್ಲದಿದ್ದರೆ ಲಿಂಗವಿಲ್ಲ. ಅದರ ಕ್ರಿಯೆಯೂ ಇಲ್ಲ. ಗುರುವು ಶಿಷ್ಯನ

ಕರಪೀಠದಲ್ಲಿ ಲಿಂಗವನ್ನು ನೆಲೆಗೊಳಿಸುವಾಗಲೂ ಜಂಗಮಪಾದೋದಕ ದಿಂದ ಅಭಿಷೇಕಮಾಡಿ, ಜಂಗಮ ಪ್ರಸಾದವನ್ನು ಅರ್ಪಿಸಿ ಕೊಡುವುದು'' ಎಂದು ಸ್ಕಾಂದ ಪುರಾಣದಲ್ಲಿ ಶಿವನು ಗುಹನಿಗೆ ಹೇಳಿದ ಮಾತುಗಳನ್ನು ಕೇಳಿಲ್ಲವೇ?

### *ಎಲೈ ಭೂಸುರೋತ್ತಮರಿರಾ!*

''ಶಿವನ ಸಭೆಯಲ್ಲಿ ಸೂತ್ರಿಕನೆಂಬ ಗಂಧರ್ವನು ನಿಮ್ಮಂತೆಯೇ ಇದೇ ಪ್ರಶ್ನೆಯನ್ನು ಕೇಳಿ ಶಿವನ ಕೋಪಕ್ಕೆ ಗುರಿಯಾಗಿ ಹಂದಿಯಾಗಿ ಹುಟ್ಟುತ್ತಾನೆ. ಶಿವನ ಕಾರುಣ್ಯದಿಂದ ಜಂಗಮಪ್ರಸಾದ ಸೇವಿಸಿ ಮತ್ತೆ ಗಣಪದವಿಯನ್ನು ಪಡೆಯುತ್ತಾನೆ'' ಎಂಬ ಅದೇ ಸ್ಕಾಂದ ಪುರಾಣದ ಮಾತುಗಳನ್ನು ಕೇಳಿರಿ.

### *ಎಲೈ ದ್ವಿಜರಿರಾ!*

ಹಿಂದೆ ಕಣ್ಣಪ್ಪ ನಾಲಗೆಯಲ್ಲಿ ಸವಿನೋಡಿ ಕೊಟ್ಟದ್ದನ್ನು ಶಿವನು ಸವಿಯಲಿಲ್ಲವೆ? ಚನ್ನಯ್ಯನುಂಡು ಮಿಕ್ಕ ಅಂಬಲಿಯ ಕೊಟ್ಟದ್ದನ್ನು ಶಿವನು ಸವಿಯಲಿಲ್ಲವೆ? ಇಂಥ ವೃತ್ತಾಂತಗಳನ್ನು ನೀವು ಕೇಳಿಲ್ಲವೆ? ಹೀಗೆ ಪ್ರಮಾಣಕೊಟ್ಟು ಜಂಗಮದ ಪಾದೋದಕ ಪ್ರಸಾದಗಳನ್ನು ಲಿಂಗಕ್ಕೆ ಕೊಟ್ಟು ಕೊಂಬುದನ್ನು ನಿರೂಪಿಸುತ್ತಾನೆ. ಆಗಲೂ ಆ ಬ್ರಾಹ್ಮಣರು ''ಆಗಮ ಪುರಾಣಗಳಲ್ಲಿ ಶಿವನು ಹೇಳಿದ ವಾಕ್ಯಗಳಿರಬಹುದು. ಅವುಗಳನ್ನು ಆ ಶಿವನೇ ಬಂದೀಗ ಹೇಳಬಾರದೆ? ಹಾಗೆ ಬಂದು ಹೇಳಿದರೆ ನಂಬ ಬಹುದು'' ಎಂದು ಅಣಕವಾಡುತ್ತಾರೆ.

ಆಗ ಶ್ರೀ ಸಿದ್ಧಲಿಂಗೇಶ್ವರರು ಈ ಬ್ರಾಹ್ಮಣ ಕಾಳುಮತಿಗಳಿಗೆ ತಿಳಿಹೇಳಬೇಕೆಂದು ಅವರೊಡನೆ ತ್ರಿಯಂಬಕೇಶ್ವರದೇವಾಲಯಕ್ಕೆ ಬಿಜಯಂಗೈಯುತ್ತಾರೆ. 'ಎಲೈ ಶಂಕರಾ! '' ಜಂಗಮ ಪ್ರಸಾದವ ಲಿಂಗಕಂ ಕುಡುವುದು ಸಲವುದೋ ಸಲ್ಲದೋ ಪೇಳೀಗಳ್. ಈ ದ್ವಿಜರಕಲುಷಮತ ಚಿತ್ತದೊಳಗಿರ್ಪಸಂದೆಗವನಳಿ'' ಎಂದು ತ್ರಿಯಂಬಕನನ್ನು ಪ್ರಾರ್ಥಿಸುತ್ತಾರೆ. ಆಗ ಆ ತ್ರಿಯಂಬಕೇಶ್ವರ ಲಿಂಗದಿಂದ ಪ್ರಣವನಾದ ಮೊಳಗಿ ''ಲಿಂಗಕ್ಕೆ ಜಂಗಮಶೇಷಹಿತವಪ್ಪುದು. ಅದರಿಂದ ಚೇತನವಪ್ಪುದು. ಜಂಗಮಶೇಷವೇ ಮುಖ್ಯ. ಸಲ್ವುದು ಸಲ್ವುದು. ಇದು ತಪ್ಪದು. ಕ್ಷಿತಿಯೊಳದರಲ್ಲಿ ಸಂದೆಗವಿಲ್ಲ'' ಎಂಬು ನುಡಿಯು ಘೋಷಣೆ ಯಾಯಿತು. ಆಗ ಆ ವಿಪ್ರರೆಲ್ಲರೂ ಆಚ್ಚರಿಗೊಂಡು ಭಕ್ತಿಯಿಂದ ಶಿವಯೋಗಿಯ ಚರಣಕ್ಕೆರಗಿ ಆತನ ಮಹಿಮೆಯನ್ನು ಭರದಿಂದ ಕೊಂಡಾಡುತ್ತಾರೆ. ಹಿಂದೆ – ಚಾವೂರ ಬೊಮ್ಮ ಜೋಳದರಾಶಿಯಲ್ಲಿ ಶಿವನನ್ನು ನುಡಿಸಿದ. ಮದನೂರದಾಸ ನಾದದಲ್ಲಿ ಶಿವನನ್ನು ನುಡಿಸಿದ. ಬಸವೇಶ ಸಂಗಮೇಶನನ್ನು ನುಡಿಸಿದ. ಕಿನ್ನರಿಬ್ರಹ್ಮ ತ್ರಿಪುರಾಂತಕನನ್ನು ನುಡಿಸಿದ. ವಾಗೀಶದೇವ ಬ್ರಹ್ಮೇಶ್ವರನ ನುಡಿಸಿದ. ಪರವೆಯ ಸೌಂದರನಾಥ ಕುಚಶಂಕರನನ್ನು ನುಡಿಸಿದ – ಎಂದು ಕೇಳಿದ್ದೆವು. ಅದಕ್ಕಿಂತಲೂ ಈಗ ನಮ್ಮ ಘನಮಹಿಮ ಸಿದ್ಧಲಿಂಗ ಯತಿರಾಯ ತ್ರಿಯಂಬಕೇಶ್ವರನನ್ನು ನುಡಿಸಿದುದು ಮಹಾಶ್ಚರ್ಯವೆಂದು ಹೊಗಳಿದರು.

### *ಪವಾಡ : ೨ ಸತ್ತರಾಜನಿಗೆ ಪ್ರಾಣದಾನ ಮಾಡಿದುದು.*

ಅತ್ತ ಬ್ರಾಹ್ಮಣರಿಂದ ಬೀಳ್ಕೊಂಡು ತ್ರಿಪುರಾಂತಕೇಶ್ವರಾಲಯ ದಿಂದ ಹೊರಹೊರಟು ಪುನಃ ಅದೇ ಗೋದಾವರಿತೀರಕ್ಕೆ ಸಿದ್ಧಲಿಂಗೇಶ್ವರರು ಆಗಮಿಸುತ್ತಾರೆ. ಅಲ್ಲಿ ಘನಮಹಾಲಿಂಗಪೂಜೆಯನೆಸಗಿ ಶಿವಧ್ಯಾನಯೋಗದಲ್ಲಿ ಮಗ್ನರಾಗಿರುತ್ತಾರೆ. ಆಗ ಒಂದು ಘಟನೆ ನಡೆಯುತ್ತದೆ : ಅಣ್ಣ ತಮ್ಮಂದಿರಾದ ತುರುಷ್ಕರಾಜರಿಬ್ಬರು ಪರಸ್ಪರ ಕಾದಾಡುತ್ತಾರೆ. ಅದರಲ್ಲಿ ಒಬ್ಬ ಸೋತು ಹೆದರಿ ಧ್ಯಾನವಸ್ಥಿತನಾದ ಶಿವಯೋಗಿ ಸನ್ನಿಧಾನಕ್ಕೆ ಕಂಗೆಟ್ಟು ಓಡಿಬಂದಿರುತ್ತಾರೆ. ಯತಿಯ ಸಮೀಪದಲ್ಲಿರುವುದೇ ತನಗೆ ರಕ್ಷಣೆಯೆಂದು ತಿಳಿದು ಭಯವುಳಿದು ಇರುತ್ತಾನೆ. ಆದರೆ ಅವನ ಶತ್ರುವು ಬೆಂಬತ್ತಿ ಬಂದು ಯತಿಯ ಬಳಿಯಲ್ಲಿಯೇ ಕುಳಿತಿದ್ದ ತನ್ನ ಶತ್ರುವಿನ ಮುಂಡವನ್ನು ಚೆಂಡಾಡುತ್ತಾನೆ. ರಕ್ತ ಬುದಬುದನೆ- ನೆಲದಲ್ಲಿ ಹರಿಯುತ್ತದೆ. ಹಗೆಯನ್ನು ಸಂಹರಿಸಿದೆನು ಎಂಬ ಭಾವನೆಯಿಂದ ಗೆಲುವಾಂತ ರಾಜ ಬೀಗುತ್ತಾನೆ. ಆದರೆ ಇಷ್ಟೆಲ್ಲಾ ಆದರೂ ಏನೊಂದನ್ನು ಅರಿಯದೆ ನಿಬ್ಬೆರಗಿನಿಂದ ಧ್ಯಾನಾವಸ್ಥಿತನಾದ ಶಿವಯೋಗಿಯನ್ನು ನೋಡಿ ನೈತಿರಭಯ ಹುಟ್ಟಿ ಹಲುಬುತ್ತಾನೆ. ಈ ಯತೀಶ್ವರ ಸಾಮಾನ್ಯನಲ್ಲ; ಜಗದ ಕರ್ತಾರ. ಈತನನ್ನು ಧ್ಯಾನದಿಂದ ಹೇಗಾದರೂ ಎಚ್ಚರಿಸಿ ಕ್ಷಮೆಯಾಚಿಸಿ ಆಶೀರ್ವಾದ ಪಡೆಯಬೇಕು ಎಂದು ನಿಶ್ಚಯಿಸುತ್ತಾನೆ. ನಿರ್ವಿಕಲ್ಪ ಸಮಾಧಿಯಲ್ಲಿ ಮುಳುಗಿರುವವರನ್ನು ಹೇಗೆ ಎಚ್ಚರಿಸುವುದೆಂದು ಯೋಚನೆಮಾಡಿ ಶಿವಯೋಗಿಯ ಪಾದಗಳ ಮೇಲೆ ಬಿದ್ದು ಹೊರಳಾಡಿ ಉಂಗುಷ್ಠವನ್ನು ಕಚ್ಚಿ ಸ್ತುತಿ ಘೋಷ ಮಾಡುತ್ತಾನೆ. ಆಗ ಭಕ್ತರ ಭಾವಗಮ್ಯರಾದ ಶಿವಯೋಗಿ ಭಯದಿಂದ ಕೈಮುಗಿದುಕೊಂಡಿರುವ ರಾಜನನ್ನು ಮತ್ತು ಶಿರಹರಿದು ಬಿದ್ದಿರುವ ರಾಜನನ್ನೂ ಕೃಪಾದೃಷ್ಟಿಯಿಂದ ನೋಡುತ್ತಾರೆ. ಅವರ ಕಾರುಣ್ಯಕಿರಣ ಸೋಕಿದ ತಕ್ಷಣ ಶಿರದೇಹದೊಡನೆ ಸೇರಿ ಪ್ರಾಣಬರುತ್ತದೆ. ಎದ್ದು ನಿಂತು ಪಾದಗಳ ಮೇಲೆ ಬಿದ್ದು ಶಿವಯೋಗಿಯನ್ನು ಸ್ತುತಿಸುತ್ತಾನೆ. ಯತೀಶ್ವರರು ವೈರಿರಾಜನನ್ನು ನೋಡಿ ಈ ನಿನ್ನ ಸೋದರನಿಗೆ ಮರುಜನ್ಮವಾಗಿದೆ. ಹಿಂದಿನ ಹಗೆತನವನ್ನು ತೊರೆದು ಸುಖವಾಗಿ ಬಾಳಿರಿ ಎಂದು ಹರಸುತ್ತಾರೆ. ಇಬ್ಬರೂ ಪರಸ್ಪರ ಆಲಿಂಗಿಸುತ್ತಾ ಗುರುವಿನಿಂದ ಬೀಳ್ಕೊಂಡು ಹೋಗುತ್ತಾರೆ.

### *ಪವಾಡ : ೩ ಮಹಾಬಲೇಶ್ವರ ಲಿಂಗದಲ್ಲಿ ಬತ್ತಿಹೋದ ಗಂಗೆಯ ಬರಿಸಿಮುದು*

ಶಿವಸ್ವರೂಪಿಯಾದ ಸಿದ್ಧಲಿಂಗೇಶ್ವರರು ತುರುಷ್ಕರಾಜನಿಗೆ ಪ್ರಾಣದಾನವ ಮಾಡಿ ಮುಂದು ಮನೋಹರವಾದ ಸಹ್ಯಾದ್ರಿಗಿರಿಯತ್ತ ಬಿಜಯಂಗೈಯುತ್ತಾರೆ. ಅಲ್ಲಿ ಮಹಾಬಲೇಶ್ವರ ದೇವಾಲಯದಲ್ಲಿರುವ ಲಿಂಗದ ಶಿರದಿಂದ ಗಂಗೆ ಉದ್ಭವಿಸಿ ಕೃಷ್ಣವೇಣೀ ಎಂಬ ಹೆಸರಿಂದ ಲೋಕ ವಿಖ್ಯಾತಳಾಗಿ ಹರಿಯುತ್ತಿದ್ದಾಳೆ. ಶಿವಯೋಗಿಯು ಅಂಥ ಆ ದೇವಾಲಯವನ್ನು ಪ್ರವೇಶಿಸಿ ಆ ಮಹಾಬಲೇಶಲಿಂಗದ ಮೇಲೆ ನಿಂತು





ತನ್ನ ಚರಣ ಪ್ರಕ್ಷಾಲನಮಾಡಿಕೊಂಡು ಮುಖತೊಳೆದು ಬಾಯಿಯಿಂದ ಗಂಗೆಯನ್ನು ತೂಪಿರಿದು ಲಿಂಗಕ್ಕೆ ಮಜ್ಜನಮಾಡುತ್ತಾರೆ. ಆ ಸಮಯಕ್ಕೆ ಸರಿಯಾಗಿ ಆ ದೇವಾಲಯದ ಅರ್ಚಕರು ಅಲ್ಲಿ ಬಂದು ಇದನ್ನು ನೋಡುತ್ತಾರೆ.

'ಎಲೈ ಜಂಗಮರೆ! ನಮ್ಮ ಮಹಾಬಲೇಶ್ವರನ ಮಸ್ತಕವನ್ನು ಅಹಂಕಾರದಿಂದ ಅಡರಿ ಮೆಟ್ಟಿ ಕಾಲ್ತೊಳೆದುಕೊಂಡುದಲ್ಲದೆ ಬಾಯಲ್ಲಿ ನೀರನ್ನು ಮುಕ್ಕಳಿಸಿ ತೂಪಿರಿದು ಲಿಂಗದ ಮೇಲೆ ಎರೆಯುವುದೆ? ನೀನು ದೇವಾಲಯದೊಳಗೆ ಹೇಗೆ ಬಂದೆ? ನಿನ್ನ ಈ ನಡತೆಯನ್ನರಿಯದೆ ಯಾರು ಒಳಗೆ ಬಿಟ್ಟವರು? ತೊಲಗು ತೊಲಗು ಎಂದು ಗದರಿಸುತ್ತಾ ಹೊರಗೆ ಕಳುಹಿಸುತ್ತಾರೆ. ಆಗ ಸಮಚಿತ್ತರಾದ ಶಿವಯೋಗಿಗಳು ಲಿಂಗಜಂಗಮ ಸಂಬಂಧದ ಹೊಲಬನು ಈ ಕುರುಬರೇನು ಬಲ್ಲರು ಎಂದು ನಸುನಗುತ್ತಾ ಹೊರಬಂದು ದೂರದಲ್ಲಿದ್ದ ಮರದ ಕೆಳಗೆ ಕುಳಿತು ಕೊಳ್ಳುತ್ತಾರೆ.

ಇತ್ತ ತತ್‌ಕ್ಷಣದಿಂದಲೇ ಲಿಂಗದ ಮಸ್ತಕದಿಂದ ಹರಿಯುತ್ತಿದ್ದ ಗಂಗೆ ಪೂರ್ಣ ಬತ್ತಿ ಹೋಗುತ್ತದೆ. ಲಿಂಗ ಒಣಗಿ ನಿರ್ದ್ರವವಾಗುತ್ತದೆ. ಅದನ್ನು ಆ ಬ್ರಾಹ್ಮಣ ಕಂಡು ಚೋದ್ಯಪಟ್ಟು ಚಿಂತಿಸುತ್ತಾರೆ. ಆ ಜಂಗಮನು ಲಿಂಗದ ತಲೆಯ ಮೇಲೆ ನಿಂತು ಕಾಲ್ತೊಳೆದುಕೊಂಡು ಎಂಜಲು ಮಾಡಿದು ದರಿಂದ ಗಂಗೆ ಬತ್ತಿ ಹೋಯ್ತು. ಇದರಿಂದ ಈ ರಾಜ್ಯಕ್ಕೆ ರಾಜನಿಗೆ ಯಾವ ಕೇಡು ಕಾದಿದೆಯೋ ಎಂಥ ಕಷ್ಟ ಬಂದೊದಗುವುದೊ ಎಂದು ಹಲುಬುತ್ತಾರೆ. ನಂತರ ವೇದಾಗಮ ಧರ್ಮಗ್ರಂಥಗಳನ್ನು ನೋಡಿ ಅನಿಷ್ಟಕ್ಕೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ: ವಿಧಿವತ್ತಾಗಿ ಯಜ್ಞಯಾಗಾದಿಗಳನ್ನು ಮಾಡುವುದು, ಮಂತ್ರವನ್ನು ಜಪಿಸುವುದು, ಪಂಚಾಮೃತಾಭಿಷೇಕವನ್ನು ಮಾಡುವುದು, ಭೂಸುರಕುಲಕ್ಕೆ ಭೂರಿ ಭೋಜನ ಮಾಡಿಸುವುದೇ ಪ್ರಾಯಶ್ಚಿತ್ತವೆಂದು ತಿಳಿದು ಹಾಗೆಯೇ ಮಾಡುತ್ತಾರೆ. ಹೀಗೆ ಹೋಮ ಹವನ ಜಪ ಅಭಿಷೇಕಾದಿಗಳನ್ನು ಮಾಡಿ ದೇವಾಲಯವನ್ನು ಎಂಜಲು ಮಾಡುತ್ತ ಬ್ರಾಹ್ಮಣರು ಭೂರಿಭೋಜಮಾಡುವ ಅವಸರದಲ್ಲಿದ್ದಾಗ ''ಎಲೈ ಕಾಳು ಬ್ರಾಹ್ಮಣದಿರ ಜಂಗಮದ ಮಹಿಮೆಯನರಿಯದೆ ಅಪರಾಧವೆಸಗಿ ಮಾಡುವ ಈ ವ್ಯರ್ಥವಾದ ಈ ಶುದ್ಧತೆಯಿಂದೇನು ಪ್ರಯೋಜನ? ಪಶ್ಚಾತ್ತಾಪವೆಂದು ತಿಳಿದು ಮಾಡುವ ಹೊಣೆಯೆಬ್ಬಿಸಿ ಉಬ್ಬಸ ತರುವ ಈ ಜಡಕರ್ಮದಿಂದೇನು ಪ್ರಯೋಜನ? ಅನ್ನಶಾಂತಿ ಯೆಂದು ಬಗೆದುಮಾಡುವ ಈ ಎಂಜಲು ಮೈಲಿಗೆಯಿಂದೇನು ಉಪಯೋಗ? ಎಲೈ ಮಂದಮತಿಗಳಿರಾ! ಹೋಗಿ ಪ್ರಾರ್ಥಿಸಿ ದಯಾಮೂರ್ತಿಯಾದ ಸಿದ್ಧಲಿಂಗೇಶ್ವರರನ್ನು ಮರಳಿ ಕರೆತನ್ನಿರಿ. ಅವರ ಪಾದಾರವಿಂದವನ್ನು ನನ್ನ ಮಸ್ತಕದ ಮೇಲೆ ಮಡಗಿಸಿರಿ. ಎಂದಿನಂತೆ ಗಂಗೆ ಹರಿವಳು''. ಎಂಬುದಾಗಿ ಧೀರಗಂಭೀರವಾಣಿಯಿಂದ ಆ ಮಹಾಬಲೇಶ್ವರಲಿಂಗವು ನುಡಿಯಿತು. ಆ ಲಿಂಗನುಡಿಯನ್ನು ಬ್ರಾಹ್ಮಣರೆಲ್ಲರೂ ಭಯಪಟ್ಟು ಅಂತೆ ಮಾಡಲು ಶಿವಯೋಗಿಯನ್ನು ಅರಸುತ್ತಾ ಮರದಕೆಳಗೆ ಮೂರ್ತಗೊಂಡಿರುವುದನ್ನು ಕಂಡು ಬಳಿಗೆ ಬಂದು ಪದಕೆರಗಿ ಶಿವರೂಪನೆ! ಕೃಪೆಯಿಂದ ದೇವಾಲಯಕೆ ಬಿಜಯಂಗೈಸಿ ಶಂಕರನ ಶಿರದಲ್ಲಿ ನಿಮ್ಮ ದಿವ್ಯಚರಣವಿಟ್ಟು ಗಂಗೆಯತರಿಸಿ ನಮ್ಮ ಅಪರಾಧವನ್ನು ಮನ್ನಿಸಿ ಕಾಯ್ವುದು'' ಎಂದು ಬೇಡುತ್ತಾರೆ. ಆಗ ಕಾರುಣ್ಯಮೂರ್ತಿ ಶಿವಯೋಗಿಯು ವಿಪ್ರರ ದಡ್ಡತನಕ್ಕೆ ನಸುನಗುತ್ತಾ ಎದ್ದು ಬಂದು ಲಿಂಗದ ಉತ್ತಮಾಂಗದಲ್ಲಿ ಚರಣವನ್ನಿರಿಸಿಮುದೇತಡ ಗಂಗೆ ಉದ್ಭವಿಸಿ ಭೋರ್ಗರೆದು ಹರಿಯುತ್ತಾಳೆ. ಆಗ ಎಲ್ಲ ವಿಪ್ರರೂ ಕೂಡಿ ಪರಂಜ್ಯೋತಿ ಪ್ರಕಾಶನಾದ ಸಿದ್ಧಲಿಂಗೇಶ್ವರನನ್ನು ಅನನ್ಯ ಭಕ್ತಿಯಿಂದ ಸ್ತುತಿಮಾಡುತ್ತಾರೆ. ಅವು ಉತ್ತಮದ ಸ್ತೋತ್ರ ಪದ್ಯಗಳಾಗಿವೆ. ಈ ಸಂಧಿಯಲ್ಲಿ ೫೭ ಪದ್ಯಗಳಿವೆ.

### *ವಿಶೇಷ ವಿಚಾರ*

ಜಂಗಮದ ಪಾದೋದಕ ಪ್ರಸಾದಾಧಿಕ್ಯವರ್ಣನೆಗೆ ಕೆರೆಯ ಪದ್ಮರಸನ ದೀಕ್ಷಾಬೋಧೆಯ ಈ ಭಾಗವನ್ನು ನೋಡಬಹುದಾಗಿದೆ.

೧. ಸ್ಥಾವರಂ ಜಂಗಮಂ ಚೈವ ದ್ವಿವಿಧಂ ಲಿಂಗಮುಚ್ಯತೇ ।
ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್ ॥

ಅರ್ಥ : ಲಿಂಗದ ನಿಜವಂ ಅರಿವ ಮಹಂತಂ
ಜಂಗಮದರ್ಚನೆ ಮಾಡೆ ಸ್ವತಂತ್ರಂ
ಜಂಗಮವದನದಿ ಲಿಂಗವು ತುಷ್ಟಂ
ಜಂಗಮದನುಸರಣೆಯೊಳದು ನಷ್ಟಂ

೨. ಸ್ಥಾವರಾರ್ಪಿತ ನೈವೇದ್ಯಂ ನ ತೃಪ್ತಿರ್ಮಮ ಪಾರ್ವತಿ ।
ಜಂಗಮಾರ್ಪಿತ ನೈವೇದ್ಯ ಮಮತಪ್ತಿಶ್ಚ ಸರ್ವದಾ ॥

ಅರ್ಥ : ಅರ್ಪಿತಮಪ್ಪುದಾ ಚರಮುಖದಿಂದಂ
ಸರ್ಪಧರನ ತೃಪ್ತಿಯುಮದರಿಂದಂ
ಜಂಗಮವಿರಹಿತದರ್ಪಿತ ಸಲ್ಲಂ
ಲಿಂಗವೊಲ್ಲಂ ತುಷ್ಟಿಗಳಲ್ಲಿಲ್ಲಂ

೩. ಲಿಂಗಾರ್ಪಿತಂ ನಕರ್ತವ್ಯಂ ಕರ್ತವ್ಯಂ ಜಂಗಮಾರ್ಪಿತಂ ।
ಲಿಂಗಜಂಗಮಯೋರ್ಮಧ್ಯೇ ಜಂಗಮಸ್ತು ವಿಶೇಷಕಃ ॥

ಅರ್ಥ : ಲಿಂಗಕೆ ಅರ್ಪಿತ ಕಾರಣಮಿಲ್ಲಂ
ಜಂಗಮಕರ್ಪಿತವಿಲ್ಲದೆ ಸಲ್ಲಂ
ಜಂಗಮಲಿಂಗದ ಈ ದ್ವಿವಿಧದೊಳಂ
ಜಂಗಮವಧಿಕಂ ಶಿವರಹಸ್ಯದೊಳಂ

೪. ವೃಕ್ಷಸ್ಯ ವದನಂ ಭೂಮಿಃ ಸ್ಥಾವರಸ್ಯಚ ಜಂಗಮಃ ।
ಮಮತೃಪ್ತಿರುಮಾದೇವಿ ಉಭಯೋರ್ಲಿಂಗಜಂಗಮೇ ॥

★

# ನೀರು ಅಮೂಲ್ಯ ಪ್ರಾಕೃತಿಕ ಸಂಪತ್ತು

– ರಾಧೆ
ಬೆಂಗಳೂರು.

**ಮೂ**ರನೆಯ ವಿಶ್ವಯುದ್ಧ ನಡೆಯುವುದಾದರೆ ಅದು ನೀರಿಗಾಗಿ, ವಿಶ್ವಸಂಸ್ಥೆಯ ಮಾಜಿ ಕಾರ್ಯದರ್ಶಿ ಬುಟ್ರೋಸ ಪಾಲಿಯಾ ಭವಿಷ್ಯವಿದು. ಮೇಲ್ನೋಟಕ್ಕೆ ಈ ಮಾತು ಅತಿಶಯೋಕ್ತಿ ಎನಿಸಿದರೂ ಸಧ್ಯದ ಸ್ಥಿತಿಗಳನ್ನು ಗಮನಿಸಿದಾಗ ಒಂದೇ ಬಾರಿಗೆ ತಳ್ಳಿಹಾಕುವಂತಿಲ್ಲ. ನಮ್ಮ ಸುತ್ತಮುತ್ತಲೂ ೩೦೦ ರಿಂದ ೮೦೦ ಅಡಿಗಳವರೆಗೆ ಭೂಮಿಯನ್ನು ಸೀಳಿ ತಡಕಾಡಿದರೂ ಹನಿ ನೀರು ಸಿಗದ ಸ್ಥಿತಿಗೆ ನಾವಿಂದು ಬಂದು ತಲುಪಿದ್ದೇವೆಂದರೆ ಪರಿಸರ ಸಮತೋಲನ ಕಾಪಾಡುವ ಜೀವರಕ್ಷಕ ಪರ್ಯಾಯ ಮಾರ್ಗವೊಂದನ್ನು ಕಂಡುಕೊಳ್ಳುವಲ್ಲಿ ಈ ತಲೆಮಾರಿನ ವೈಫಲ್ಯ ಎದ್ದು ಕಾಣುತ್ತಿದೆ.

**ಜಾ**ಗತಿಕ ಅಂಕೆ ಸಂಖ್ಯೆಗಳಿಗನುಗುಣವಾಗಿ ಪ್ರತಿದಿನ ಏನಿಲ್ಲವೆಂದರೂ ಸರಾಸರಿ ೨ ಲಕ್ಷ ೩೦ ಸಾವರ ಮಂದಿಯ ಸಂಖ್ಯೆ ಭೂಮಿಯ ಮೇಲೆ ಹೆಚ್ಚುತ್ತಿದೆ. ಈ ಪ್ರಮಾಣದ ಜನರಿಗೆ ತೃಪ್ತಿಯಾಗುವಷ್ಟು ಜೀವಜಲವನ್ನು ಪೂರೈಸುವುದೆಂದರೆ ಸಾಮಾನ್ಯ ಸಂಗತಿಯೇ? ಮಾನವತೆಯ ಅಸ್ತಿತ್ವಕ್ಕೆ ನೀರೇ ಮೂಲಾಧಾರ. ಯಾವುದೇ ಜೀವಿ ಆಹಾರ ಇಲ್ಲದೆಯೂ ತಿಂಗಳುಗಟ್ಟಲೆ ಬದುಕಬಹುದು. ಆದರೆ ನೀರಿಲ್ಲದೆ ಬದುಕಲಾರವು. ಭೂಮಿಯ ಮೂರನೆಯ ಎರಡು ಭಾಗ ನೀರಿನಿಂದ ಆವೃತ ಎಂಬುದು ನಿಜ. ಆದರೆ ಮಳೆಯಿಂದ ದೊರೆಯುವ ಭೂಮೇಲ್ಮೈ ಅಥವಾ ಭೂಗರ್ಭದಲ್ಲಿನೀರೆಲ್ಲವೂ ಸಂಪೂರ್ಣ ಯೋಗ್ಯ ನೀರಲ್ಲ. ಆದರಲ್ಲಿ ತೀರಾ ಕನಿಷ್ಠ ಪ್ರಮಾಣದ ನೀರು ಅಂದರೆ ಶೇಕಡಾ ಮೂರರಷ್ಟು ಮಾತ್ರ ಕುಡಿಯಲು ಯೋಗ್ಯ. ಉಳಿದೆಲ್ಲವೂ ಉಪ್ಪು ನೀರು. ಯೋಗ್ಯವಾದ ನೀರಿನಲ್ಲಿಯೂ ಶೇ. ೯೯ ಹಿಮ ಸಮೂಹಗಳಾಗಿ ಭೂಗರ್ಭದಲ್ಲಿ ಅಡಗಿ ಕುಳಿತಿದೆ. ಹೀಗಾಗಿ ಮಾನವನಿಗೆ ಒಟ್ಟು ಬಳಕೆಗೆ ಸಿಗುವ ಜನ ಸಂಪತ್ತು ಕೇವಲ ೦.೦೩ರಷ್ಟು ಮಾತ್ರ.

**ಮ**ನುಷ್ಯನಿಗೆ ಪ್ರತಿದಿನ ಏನಿಲ್ಲವೆಂದರೂ ಸರಾಸರಿ ೨.೮ ಲೀಟರಿನಷ್ಟು ಶುದ್ಧ ನೀರಿನ ಅಗತ್ಯವಿದೆ. ಸುಮಾರ ೧.೫ ಲೀಟರಿನಷ್ಟು ನೀರು ನಾವು ತೆಗೆದುಕೊಳ್ಳುವ ಆಹಾರ ಪದಾರ್ಥಗಳಿಂದ ದೊರೆಯುತ್ತದೆ ಎಂದಾದರೂ ಉಳಿದ ೧.೩ ಲೀಟರನ್ನು ನೇರವಾಗಿ ಸೇವಿಸಬೇಕಾದುದು ಅನಿವಾರ್ಯ. ಆದರೆ ಇಂದು ನಮ್ಮ ದೇಶದಲ್ಲಿ ಶೇ. ೧೨ ಜನರಿಗೆ ಮಾತ್ರ ಶುದ್ಧ ನೀರು ದೊರೆಯುತ್ತಿದೆ. ದೇಶದ ನಾಗರಿಕರಿಗೆ ಕನಿಷ್ಠ ಶುದ್ಧ ನೀರು ಸರಬರಾಜು ಮಾಡುವಲ್ಲಿಯೂ ಸರಕಾರಗಳೂ ಅಸಹಾಯಕವಾಗಿವೆ. ಆಧುನಿಕತೆಯ ಅಮಲಿನಲ್ಲಿ ಅಧಿಕಾರ ಹಾಗೂ ಆಸ್ತಿ ಅಂತಸ್ತುಗಳ ಸಂಪಾದನೆಯ ದುರಾಸೆಯ ಪ್ರತಿಫಲವಾಗಿ ನಾವಿಂದು ಕುಡಿಯುವ ನೀರಿನ ಸೆಲೆಯನ್ನು ಬಗೆದು ಬಿಟ್ಟಿದ್ದೇವೆ. ಸ್ವಾರ್ಥದ ಭರದಲ್ಲಿ ನಾವೇ ನಮ್ಮ ಕೈಯಾರೆ ಜಲಕ್ಷಾಮವನ್ನು ಸೃಷ್ಟಿಸಿಕೊಳ್ಳುತ್ತಿದ್ದೇವೆ. ದೈವದತ್ತವಾಗಿ ನಮಗೆ ದೊರೆಯುತ್ತಿರುವ ಜಲಸಂಪತ್ತಿನ ನಿರ್ವಹಣೆ ಆ ಮೂಲಕ ಅದರ ರಕ್ಷಣೆಯ ಕನಿಷ್ಠ ಹೊಣೆಗಾರಿಕೆಯನ್ನು ನಾವಿಂದು ಮರೆತಿರುವುದು ದುರದೃಷ್ಟಕರ.

ವಿಶ್ವಸಂಸ್ಥೆಯ ವರದಿಯೊಂದರ ಪ್ರಕಾರ ೧೯೯೦ರಲ್ಲಿ ಪ್ರಪಂಚದ ೧೨೦ ಕೋಟಿ ಮಂದಿ ಕುಡಿಯಲು ನೀರಿಲ್ಲದ ಪರಿಸ್ಥಿತಿಯಲ್ಲಿ ನಲುಗಿ ನಿತ್ರಾಣರಾಗಿದ್ದರು. ಇದಕ್ಕಿಂತ ಆತಂಕಕಾರಿ ಸಂಗತಿ ಎಂದರೆ ಫ್ಲೋರೋಸಿಸ್ ಮುಂತಾದ ಜಲಸಂಬಂಧಿ ರೋಗಗಳಿಂದ ವಿಶ್ವದ ಸರಿಸುಮಾರು ೧೨೫ ಕೋಟಿಯಷ್ಟು ಜನ ಬಳಲುತ್ತಿದ್ದಾರೆ. ಸುಮಾರು ೧೭೦ ಕೋಟಿಗೂ ಹೆಚ್ಚು ಮಂದಿಗೆ ಸ್ನಾನವೆಂಬುದೇ ತಿಳಿದಿಲ್ಲವೆಂದರೆ ನೀವು ನಂಬಲೇಬೇಕು.

**ಭಾ**ರತದ ಪರಿಸ್ಥಿತಿಯೂ ಸಹ ಇದಕ್ಕಿಂತ ಭಿನ್ನವಾಗಿಯೇನೂ ಉಳಿದಿಲ್ಲ. ೨೦೫೦ರ ಸುಮಾರಿಗೆ ಪ್ರಪಂಚದೆಲ್ಲೆಡೆ ಹನಿ ನೀರಿಗಾಗಿ ಹಾಹಾಕಾರ ನಡೆಯಲಿದೆ. ಇದಕ್ಕಾಗಿ ಜಲಸಮರವೇ ನಡೆದು ಮನುಷ್ಯತ್ವವನ್ನೇ ಮೈಮರೆತು ಮೃಗದಂತೆ ವರ್ತಿಸುತ್ತಾನೆಂಬುದು ಖಂಡಿತ ಊಹಾ ಚಿತ್ರವಲ್ಲ. ವಾಸ್ತವವಾಗಿ ೧೯೯೨ರ ಸುಮಾರಿಗೆ ಅಧ್ಯಯನ ಕೈಗೊಂಡ ವೈದ್ಯನಾಥನ್ ಸಮಿತಿ ಸಹ ಇಂತಹದೊಂದು ಘನಘೋರ ಚಿತ್ರಣವನ್ನು ದೇಶದ ಮುಂದಿಟ್ಟಿತು. ದೇಶದಲ್ಲಿ ನಡೆಯುತ್ತಿರುವ ಜಲ ವಿವಾದಗಳು ನೀರಿಗಾಗಿ ಚಳುವಳಿಗಳನ್ನು ಗಮನಿಸಿದಾಗ ಇದರ ಗಂಭೀರತೆ ಅರಿವಿಗೆ ಬರುತ್ತದೆ.

**ಭಾ**ರತದಲ್ಲಿ ೨೦೫೦ರ ಹೊತ್ತಿಗೆ ೨೭೮೮ ಶತಕೋಟಿ ಕ್ಯೂಬಿಕ್ ಲೀಟರ್ ನೀರಿನ ಅಗತ್ಯ ಸೃಷ್ಟಿಯಾಗುತ್ತದೆ ಎಂದು ಅಂದಾಜು ಮಾಡಲಾಗಿದೆ. ಇದರಲ್ಲಿ ೧೪೦೩ ಶತಕೋಟಿ ಕ್ಯೂಬಿಕ್ ಲೀಟರ್ ನೀರು ಮಾತ್ರ ಲಭ್ಯವಾಗಲಿದೆ. ಉಳಿದವರ ಪಾಲಿಗೆ ಕಾದಾಟ ಅನಿವಾರ್ಯ.

ಸ್ಟಾಕ್ ಹೋಂನಲ್ಲಿ ನಡೆದ ವಿಶ್ವ ಸಮ್ಮೇಳನವೊಂದರಲ್ಲಿ ನಡೆದ ಚರ್ಚೆಯ ಫಲಿತಾಂಶದ ಪ್ರಕಾರ ಸಧ್ಯದ ಸ್ಥಿತಿಯಲ್ಲಿ ಒಬ್ಬ ವ್ಯಕ್ತಿ ಕನಿಷ್ಠ ೫೦ ಲೀಟರ್ ನೀರು ಬಳಸುತ್ತಿದ್ದಾನೆ. ಕ್ಯಾಲಿಫೋರ್ನಿಯಾದಲ್ಲಿ ಸರಾಸರಿ ೧೨೭ ಲೀಟರ್ ನೀರು ಬಳಸುತ್ತಿದ್ದಾರೆ. ಭೂತಾನ್ ಮಂದಿಗೆ ತಲಾ ೧೫ ಲೀಟರ್ ನೀರು ಸಹ ದೊರೆಯುತ್ತಿಲ್ಲ. ಬಾಂಗ್ಲಾದಲ್ಲಿ ೧೭ ಲೀಟರ್ ನೀರು ಪ್ರತಿಯೊಬ್ಬ ವ್ಯಕ್ತಿಗೆ ದೊರೆಯುತ್ತಿದೆ. ಆಫ್ರಿಕಾದ ಮರಳುಗಾಡಿನ ದೇಶದಲ್ಲಿ ಕನಿಷ್ಠ ೪.೫ ಲೀಟರ್ ನೀರು ಸಹ ಸಿಗುತ್ತಿಲ್ಲ. ಭಾರತ ಮತ್ತು ಚೀನಾಗಳಲ್ಲಿ ಸದ್ಯಕ್ಕೆ ದೊರೆಯುತ್ತಿರುವುದು ತಲಾ ೨೨.೬೩ ಲೀಟರ್ ನೀರು ಮಾತ್ರ.



**ಈ** ಅಂಕಿ ಅಂಶಗಳನ್ನು ಗಮನಿಸಿದಾಗ ವಿಶ್ವದ ಒಟ್ಟಾರೆ ಯಾವುದೇ ದೇಶಗಳಲ್ಲಿ ಜಲ ಸಂರಕ್ಷಣೆಯ ಜಾಗೃತಿಯೇ ಇಲ್ಲವೆಂಬುದು ಅರಿವಿಗೆ ಬರುತ್ತದೆ. ಪರಿಸ್ಥಿತಿಯ ಲಾಭ ಪಡೆಯಲು ಹವಣಿಸುತ್ತಿರುವ ಕೆಲ ಕಂಪನಿಗಳು ತನ್ನಿಂತಾನೇ ನೀರನ್ನು ವ್ಯಾಪಾರದ ವಸ್ತುವನ್ನಾಗಿಸಿವೆ. ಬಹುತೇಕ ದೇಶಗಳಲ್ಲಿ ಜಲ ಜಾಗೃತಿಯ ಬಗ್ಗೆಯಾಗಲಿ ಜನ ಸಹಭಾಗಿತ್ವದ ಮೂಲಕ ಮಿತನೀರು ಬಳಕೆಯನ್ನು ಸಾಧಿಸುವ ಬಗ್ಗೆಯಾಗಲಿ ನಂಬಿಕೆ ಬಂದಿಲ್ಲ. ವಸ್ತುಸ್ಥಿತಿಯ ಬಿಸಿ ಆಡಳಿತಾರೂಢರನ್ನು, ಜನಸಾಮಾನ್ಯರನ್ನು ತಟ್ಟಿಯೇ ಇಲ್ಲ.

**ದೇ**ಶದ ಮಟ್ಟಿಗೆ ಹೇಳುವುದಾದರೆ ನೆಲಜಲಗಳ ಸಂರಕ್ಷಣೆಯ ನಿಟ್ಟಿನಲ್ಲಿ ಮಣ್ಣು, ನೀರು, ಪರಿಸರಗಳ ಸಮಗ್ರ ಚಿಂತನೆ ನಡೆದೇ ಇಲ್ಲ. ಗಣಿ ಮತ್ತು ಭೂಗರ್ಭ ಇಲಾಖೆ ಅಂತರ್ಜಲದ ಬಗ್ಗೆ ಮಾತ್ರ ಯೋಚಿಸುತ್ತಿದೆ. ಅರಣ್ಯ ಇಲಾಖೆಗೆ ಮಣ್ಣು, ನೀರಿನ ಉಸಾಬರಿ ಬೇಡವಾಗಿದೆ. ಜಲಸಂಪನ್ಮೂಲ ಇಲಾಖೆ ಅರಣ್ಯ ತನಗೆ ಸಂಬಂಧಿಸಿದ ವಿಷಯವೇ ಅಲ್ಲ ಎಂದುಕೊಂಡಿದೆ. ಇನ್ನು ಕೃಷಿ ಇಲಾಖೆ ಬೆಳೆ ಬೆಳೆಯುವುದೊಂದೆ ತನ್ನ ವಿಷಯ ವ್ಯಾಪ್ತಿ ಎಂದುಕೊಂಡುಬಿಟ್ಟಿದೆ. ಹೀಗಾಗಿ ಒಟ್ಟಾಗಿ ಪರಿಸರ ಸಮನ್ವಯದ ಅರಿವು ಸಂರಕ್ಷಣೆಯ ಕೊರತೆಯಿಂದ ದಿಕ್ಕೆಡುತ್ತಿದ್ದೇವೆ.

**ಇಂ**ದು ಬರಪರಿಸ್ಥಿತಿ ನಮ್ಮನ್ನು ಕಾಡುತ್ತಿದ್ದರೆ ಅದಕ್ಕೆ ಬೇರೆಯವರು ಕಾರಣರಲ್ಲ. ಮೊದಲು ನಮ್ಮತ್ತಲೇ ತೋರುಬೆರಳು ತಿರುಗುತ್ತದೆ. ಏಕೆಂದರೆ ಬರ ಮಾನವನಿರ್ಮಿತ ಸಂಕಷ್ಟ. ಇದು ಖಂಡಿತ ನಿಸರ್ಗದ ತಾರತಮ್ಯವಲ್ಲ. ಸಣ್ಣದೊಂದು ಎಚ್ಚರದಿಂದಾಗಿ ನಾವು ಇಂತಹ ಭೀಕರ ಸಂಕಷ್ಟಗಳಿಂದ ಪಾರಾಗಬಹುದಿತ್ತು. ಜನಸಂಖ್ಯೆ ಹೆಚ್ಚಳವಾದ ಮಾತ್ರಕ್ಕೆ ನೀರಿನ ಕೊರತೆಗೆ ಅದನ್ನೇ ಕಾರಣವೆಂದು ಬೊಟ್ಟು ಮಾಡಲಾಗದು. ನೀರಿನ ಸದ್ವಿನಿಯೋಗದ ನಿಟ್ಟಿನಲ್ಲಿ ನಾವು ಯೋಚಿಸಿಯೇ ಇಲ್ಲ. ಮಳೆ ನೀರಿನ ಕೊಯ್ಲಿನಲ್ಲಿ ನಿರಂತರ ಜಾಗೃತಿ ಮೂಡಿಸುತ್ತಿರುವ ಶ್ರೀ ಪಡ್ರೆಯವರ ಪ್ರಕಾರ ನಾವು ಸಾಕ್ಷರರಾಗಿದ್ದೇವೆಯೇ ವಿನಃ ಜಲ ಸಾಕ್ಷರರಾಗಿಯೇ ಇಲ್ಲ. ಈ ವಿಷಯದಲ್ಲಿ ನಾವಿನ್ನೂ ನಿರಕ್ಷರ ಕುಕ್ಷಿಗಳು. ಬರ ಬಂದೆರಗಿದ ಮೇಲೆ ಶಸ್ತ್ರಾಭ್ಯಾಸಕ್ಕೆ ತೊಡಗಿರುವ ಕೆಲ ದೇಶಗಳು ಇದೀಗ ಜಲ ಸದ್ವಿನಿಯೋಗಕ್ಕೆ ಪ್ರಯೋಗಗಳನ್ನು ಆರಂಭಿಸಿವೆ.

**ನೀ**ರಿನ ಸಮಸ್ಯೆ ಕೇವಲ ಒಂದು ದೇಶಕ್ಕೆ ಸಂಬಂಧಿಸಿದ ವಿಷಯವಲ್ಲ. ಇದು ಸಮಸ್ತ ಮನುಷ್ಯ ಕುಲದ ಎದುರಿಗಿರುವ ಸವಾಲು. ಯಾವುದೇ ದೇಶ ಎಂತಹ ಸಂಪತ್ತನ್ನಾದರೂ ನೆರವಿನ ರೂಪದಲ್ಲಿ ಕೊಡಲು ಸಿದ್ಧವಿರುತ್ತದೆ. ಆದರೆ, ಜೀವನಾವಶ್ಯಕವಾದ ನೀರಿನ ವಿಷಯದಲ್ಲಿ ರಾಜಿಯಾಗುವುದಿಲ್ಲ. ಪಾಶ್ಚಿಮಾತ್ಯ ದೇಶಗಳು ವಿಮಾನದಲ್ಲಿ ನೀರು ಸರಬರಾಜು ಮಾಡಲು ಗ್ಲೋಬಲ್ ಟೆಂಡರ್‌ಗಳನ್ನು ಆಹ್ವಾನಿಸಿದೆ ಎಂದರೆ ನೀವು ನಂಬುತ್ತೀರಾ? ವಿಶ್ವ ಬ್ಯಾಂಕಿನ ಮಾಹಿತಿಯೊಂದರ ಪ್ರಕಾರ ಅಭಿವೃದ್ಧಿಶೀಲ ದೇಶಗಳಲ್ಲಿ ೭೦೦ ಶತಕೋಟಿ ಡಾಲರ್‌ಗಳ ಬಂಡವಾಳದೊಂದಿಗೆ ವಾಟರ್ ಮಾರ್ಕೆಟ್ ಆರಂಭಿಸುವುದು ತಕ್ಷಣದ ಅಗತ್ಯ. ಶುಭ್ರ ಜಲಕ್ಕಾಗಿ ೧೫೦ ಸಾವಿರ ಕೋಟಿ ಡಾಲರ್‌ಗಳನ್ನು ವೆಚ್ಚಮಾಡುವುದು ತೀರಾ ಅನಿವಾರ್ಯ. ಹೀಗಾಗಿ ಜಾಗತಿಕ ಮಟ್ಟದಲ್ಲಿ ಜಲಸಾಕ್ಷರತೆಗೆ ನಾಂದಿ ಹಾಡಲೇಬೇಕಿದೆ.

ತಿಳಿದೋ ತಿಳಿಯದೆಯೋ ನಾವಿಂದು ನೀರನ್ನು ಪೋಲು ಮಾಡುತ್ತಿರುವುದಂತೂ ಸತ್ಯ. ಲಭ್ಯ ನೀರಿನ ಶೇ. ೮೦ರಷ್ಟು ಕೃಷಿಯೊಂದಕ್ಕೆ ಬಳಕೆಯಾಗುತ್ತಿದೆ. ವಾಸ್ತವವಾಗಿ ಕೃಷಿಗೆ ಇಷ್ಟು ನೀರು ಅಗತ್ಯ ಇದೆ ಎಂಬುದರ ಬಗ್ಗೆ ಯೋಚಿಸಬೇಕಿದೆ. ವೈಜ್ಞಾನಿಕ ಕೃಷಿ ಪದ್ಧತಿಗಳಿಂದ ನೀರಿನ ಮಿತ ಬಳಕೆ ಸಾಧ್ಯ. ಅಣೆಕಟ್ಟು, ಕೆರೆಗಳು, ಒಡ್ಡುಗಳಿಂದ ನಿಯಮಿತ ಸರಬರಾಜಿನಿಂದಾಗಿ ನೀರು ವೃಥಾ ಪೋಲಾಗುವುದನ್ನು ತಡೆಯಬಹುದಾಗಿದೆ. ಭೂಲಕ್ಷಣಗಳಿಗನು ಗುಣವಾಗಿ ಕಡಿಮೆ ನೀರು ಬಳಸಿಯೂ ಹೆಚ್ಚು ಇಳುವರಿ ಪಡೆಯಬಹುದು. ಯಾವ ಪ್ರದೇಶದಲ್ಲಿ ಯಾವ ಬೆಳೆ ಬೆಳೆಯ ಬೇಕೆಂಬ ಮೂಲಭೂತ ಕೃಷಿ ಪದ್ಧತಿಯ ಕೊರತೆಯೂ ನೀರು ಪೋಲಾಗುತ್ತಿರುವುದಕ್ಕೆ ಕಾರಣ. ಸೌದಿಯಲ್ಲಿ ಶೇ. ೬೦ರಷ್ಟು ಅಧಿಕ ನೀರು ಗೋಧಿ ಕೃಷಿಗಾಗಿ ವ್ಯಯವಾಗುತ್ತಿದೆ. ಕೃಷಿಗೆ ಅನುಕೂಲವಲ್ಲದ ಕ್ಯಾಲಿಫೋರ್ನಿಯಾ ದಲ್ಲಿ ಬಲವಂತದಿಂದ ಬೆಳೆ ಬೆಳೆಯಲಾಗುತ್ತಿದೆ. ನಮ್ಮದೇ ನೆರೆ ರಾಜ್ಯ ತಮಿಳು ನಾಡಿನಲ್ಲಿ ಭತ್ತದ ಬೆಳೆಗೆ ವೃಥಾ ನೀರು ನಿಲ್ಲಿಸಿ ಕೃಷಿ ನಡೆಸಲಾಗುತ್ತಿದೆ ಎಂಬ ಗಂಭೀರ ಆರೋಪ ಕೃಷಿ ತಜ್ಞರಿಂದ ಕೇಳಿ ಬರುತ್ತಿದೆ. ಇನ್ನು ದಿನಿತ್ಯದ ಗೃಹ ಕೃತ್ಯಗಳಲ್ಲಿ ನೀರಿನ ಪೋಲು ಸರ್ವೇಸಾಮಾನ್ಯ. ಆಧುನಿಕ ಉಪಕರಣಗಳ ಭರಾಟೆ ಯಲ್ಲಂತೂ ಐದಾರು ಲೀಟರ್ ಬಳಸುವ ಸಂದರ್ಭದಲ್ಲಿ ೧೦-೧೫ ಲೀಟರ್ ನೀರನ್ನು ಬಳಸಲಾಗುತ್ತಿದೆ. ಹೀಗಾಗಿ ಆಧುನಿಕತೆಯ ಹೆಸರಿನಲ್ಲಿ ನೀರಿನ ಪೋಲು ಸಾಮಾನ್ಯ ವೆಂಬಂತಾಗಿದೆ.

ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ಕೆರೆಯೇ ಜೀವಾಳ. ಕೃಷಿಗಷ್ಟೇ ಅಲ್ಲ, ಸಮಸ್ತ ಮಾನವ ಜನಾಂಗದ ದಾಹ ಇಂಗಿಸುವ ಇಂತಹ ಕೆರೆಗಳೇ ಇಂದು ಇಂಗಿ ಹೋಗಿವೆ. ಹತ್ತು ಹಲವು ಕಾರಣಗಳಿಂದಾಗಿ ದೇಶದಲ್ಲಿಂದು ಶೇ. ೮೦ರಷ್ಟು ಕೆರೆಗಳು ಪುನರುಜ್ಜೀವನಕ್ಕಾಗಿ ಬಾಯ್ತೆರೆದು ನಿಂತಿವೆ. ಅಂತರ್ಜಲ ಮರುಪೂರಣ ನಡೆದಿದೆ. ಸರ್ವರನ್ನೂ ಸುಭಿಕ್ಷವಾಗಿಡಬಲ್ಲ ಕೆರೆಗಳ ಪರೋಕ್ಷಪ್ರಯೋಜನಗಳ ಬಗೆಗೆ ನಾವಿಂದು ಅಂಧರಾಗಿದ್ದೇವೆ.

ಕೆರೆಗಳ ಪುನರುಜ್ಜೀವನ ಎಂದರೆ ಅದರ ದುರಸ್ಥಿ ಅಥವಾ ಹೊಳೆತ್ತುವುದು ಎಂದಷ್ಟೇ ನಾವು ಭಾವಿಸಿದಂತಿದೆ. ಒಡ್ಡು ಅಥವಾ ಕೆರೆಗಳಿಂದ ನೀರು ಹರಿಸುವ ಅಥವಾ ಕೆರೆಗಳಿಗೆ ನೀರು ಹರಿಯುವ ಕಾಲುವೆಗಳ ಮರು ರಚನೆ, ನಂತರದ ನಿರ್ವಹಣೆ, ನೀರು ಹಂಚಿಕೆಯಲ್ಲಿ ವೈಜ್ಞಾನಿಕ ಸೂತ್ರ, ಹೀಗೇ ಸಮಗ್ರ ಅಭ್ಯುದಯದ ನಕಾಶೆಯನ್ನು ನಾವು ಸಿದ್ಧಪಡಿಸಿಕೊಳ್ಳಬೇಕಿದೆ.

*(ಕೃಪೆ : ಬೆಳಕು)* ★

## ಮನುಷ್ಯ ಜನ್ಮದ ಸಾರ್ಥಕತೆ

–ವ್ಹಿ.ಸಿ. ಅಂದಾನಿ
ಗೋಕಾಕ್

"ನರಜನ್ಮದಿಂದಿಹದೊಳು ಮಿಗಿಲುಂಟೆ?" ಮನುಷ್ಯ ಜನ್ಮವು ಲಭಿಸುವುದು ದುರ್ಲಭವು. ಅದು ಅನೇಕ ಜನ್ಮದ ಪುಣ್ಯದ ಫಲದಿಂದ ಬಂದಿರುವುದು. ಮನುಷ್ಯನಿಗೆ ಸಾರಾಸಾರ ವಿಚಾರ ಮಾಡತಕ್ಕ ಪ್ರಜ್ಞಾನವಿರುವುದರಿಂದ ಹಾಗೂ ತಾನು ಯಾರು ಎಂಬುದನ್ನು ತಿಳಿದುಕೊಂಡು ಜನನ-ಮರಣ ಸಂಸಾರ ದುಃಖವನ್ನು ತೊಲಗಿಸಿ ಪರಮಾನಂದವನ್ನು ಪ್ರಾಪ್ತಿಮಾಡಿಕೊಳ್ಳುವ ಸಾಧ್ಯವಿರುವುದರಿಂದ ಎಲ್ಲ ಜೀವರಾಶಿಗಳಲ್ಲಿ ಮನುಷ್ಯ ಜನ್ಮವು ಶ್ರೇಷ್ಠವು. ಉಂಡುತಿಂದು ವ್ಯರ್ಥಕಾಲಹರಣ ಮಾಡಿ ಮಣ್ಣಾಗಿ ಹೋಗುವುದು ಅದರ ಗುರಿಯಲ್ಲ. ಮನುಷ್ಯನು ತನ್ನ ಸ್ವರೂಪ ಸ್ಥಿತಿಯನ್ನು ಅರಿಯದ್ದರಿಂದ ಸ್ಥೂಲ ದೇಹವೇ ತಾನೆಂದು ನೆರೆನಂಬಿ ಲೌಕಿಕ ವಿಷಯಗಳ ವ್ಯವಹಾರದಲ್ಲಿ ಪರಿಣತೆಯನ್ನು ಹೊಂದಿ ಸುಖವನ್ನು ಅಪೇಕ್ಷಿಸುತ್ತ ದುಃಖದ ದಾರಿಯಲ್ಲಿಯೇ ಮುಂದುವರೆಯುವನು. ತನ್ನಲ್ಲಿಯೇ ಹುದುಗಿರುವ ಆನಂದವನ್ನು ಬಾಹ್ಯ ಜಗತ್ತಿನಲ್ಲಿ ಹುಡುಕುತ್ತಿರುವನು. ಆದರೆ ತನ್ನಲ್ಲಿಯೇ ಇರುವ ಶಾಶ್ವತ ಸುಖವನ್ನು ಹೊಂದಲು ಸ್ವಾನುಭಾವ ಮಾರ್ಗದರ್ಶನದ ಗುರಿಯತ್ತ ಸಾಗಿ ಗುಣ ಕರ್ಮ ಸ್ವಭಾವ ಸಂಸ್ಕಾರಗಳನ್ನು ಸಮೃದ್ಧಗೊಳಿಸಿ ದೇಹ ಸಂಬಂಧ ವಿಷಯ ಗಳಲ್ಲಿ ವಿಸ್ಮೃತಿಹೊಂದಿ ಮನಸ್ಸನ್ನು ಏಕಾಗ್ರತೆಯಲ್ಲಿ ಇಟ್ಟುಕೊಂಡು ಪರಮಾತ್ಮನ ಅನನ್ಯ ಚಿಂತನೆಯಿಂದ ಜೀವನ್ಮುಕ್ತ ಸ್ಥಿತಿಯನ್ನು ಪ್ರಾಪ್ತಿ ಮಾಡಿಕೊಳ್ಳುವುದೇ ಮನುಷ್ಯನ ಮೊದಲ ಗುರಿ.

"ಧರ್ಮ ಏವ ಹತೋಹಂತಿ, ಧರ್ಮೋರಕ್ಷತಿ ರಕ್ಷಿತಃ" ಅಧರ್ಮದಿಂದ ನಡೆದರೆ ನಾಶ ಹೊಂದುವೆವು ಆದರೆ ಧರ್ಮದಿಂದ ನಡೆದರೆ ಧರ್ಮವು ನಮ್ಮನ್ನು ಕಾಪಾಡುತ್ತದೆ. ಸಂಸಾರ ದುಃಖವನ್ನು ತೊಲಗಿಸಿ ಜೀವಿಗಳ ಕರ್ಮಫಲಗಳನ್ನು ತೊಳೆದು ಸುಖಶಾಂತಿಯನ್ನು ದೊರಕಿಸುವ ಸಾಧನವೇ ಧರ್ಮ. ಲೋಕ ಜೀವನವನ್ನು ಸಮಾಧಾನ ಸ್ಥಿತಿಯಲ್ಲಿರಿಸಿ ಕಾಪಾಡುವ ಒಂದು ನ್ಯಾಯ ವಿಧಾನವೇ ಧರ್ಮ. ಯಾವುದು ತನ್ನನ್ನು ಅಧಃಪತನದಿಂದ ಎತ್ತಿ ಹಿಡಿಯುವುದೋ ಆ ನೀತಿಯ ನೆಲೆಗಟ್ಟೆ ಧರ್ಮ. ಸತ್ಯ, ಪರೋಪಕಾರ, ದಯ, ದಾನ, ಅಹಿಂಸೆ, ಆಸ್ತೇಯ, ಕ್ಷಮೇ ಮೊದಲಾದ ಮಾನವೀಯ ಗುಣಗಳು ಧರ್ಮದ ಅಂಗಗಳು. ಸಕಲ ಜೀವರಾಶಿಗಳಿಗೆ ಲೇಸನೆ ಬಯಸುವುದು ಧರ್ಮದ ಸಾರ. ತನ್ನ ಹಿತದೊಂದಿಗೆ ಪರಹಿತವನ್ನು ಬಯಸುವ ಮನೋಧರ್ಮವನ್ನು ಬೆಳೆಯಿಸಿಕೊಳ್ಳುವುದರಲ್ಲಿಯೇ ಜೀವನದ ಸಫಲತೆ ಇದೆ. ಪರೋಪಕಾರವೇ ಪುಣ್ಯ, ಪರಪೀಡೆಯೇ ಪಾಪ. ನಾವು ಮಾಡುವ ಪುಣ್ಯ-ಪಾಪಗಳ ಫಲಗಳೇ ಸುಖ-ದುಃಖಗಳು. ಅವು ನಮ್ಮ ಸ್ವಂತ ಆಸ್ತಿ ಮಾತ್ರ. ಮರಣಾಂತ್ಯಕ್ಕೆ ನಮ್ಮ ಕೂಡ ಬರುವವು ಇವೆರಡು ಮಾತ್ರ. ಆದರೆ ಯಾವುದೇ ಲೌಕಿಕ ಆಸ್ತಿಗಳು ನಮ್ಮ ಕೂಡ ಬರಲಾರವು.

ಶರೀರ ನಶ್ವರ, ಸಂಪತ್ತು ಶಾಶ್ವತವಲ್ಲ ಆದುದರಿಂದ ಪ್ರಾಯಹೋಗದ ಮುನ್ನ ಮುತ್ತು ಮುಟ್ಟದ ಮುನ್ನ ಪರಹಿತಕ್ಕಾಗಿಯೇ ಶರೀರವಿರುವುದರಿಂದ ಇಹಪರ ಸುಖಕ್ಕೆ ಸಾಧನವಾದ ಧರ್ಮ ಸಂಗ್ರಹವನ್ನು ಮಾಡಿಕೊಂಡು, ಲೌಕಿಕ ಜೀವನದೊಡನೆ ಆಧ್ಯಾತ್ಮಿಕತೆಯನ್ನು ಅಳವಡಿಸಿಕೊಂಡು, ತನ್ನ ತಾನರಿದು, ಭಕ್ತಿ ಜ್ಞಾನ ವೈರಾಗ್ಯ ಮಾರ್ಗ ಹಿಡಿದು, ಪರಮನ ನೆಲೆಕಂಡು, ಜನನ-ಮರಣ ಸಂಸಾರ ದುಃಖವನ್ನು ತೊಲಗಿಸಿ ಪರಮಾನಂದ ಪ್ರಾಪ್ತಿ ಸ್ಥಿರ ಮುಕ್ತಿ ಪಡೆಯುವುದೇ ಮನುಷ್ಯ ಜನ್ಮದ ಸಾರ್ಥಕವು ಹಾಗೂ ಲಾಭವು. ಧರ್ಮದಿಂದ ಸುಖ, ತ್ಯಾಗದಿಂದ ಅಮೃತತ್ವ, ಜ್ಞಾನದಿಂದ ಪರಮಪದ.





## ರಾಷ್ಟ್ರೀಯ ಭಾವೈಕ್ಯತೆಗಾಗಿ ಶಿಕ್ಷಣ

– ಕೆ.ಎಸ್. ರಾಜಶೇಖರಯ್ಯ
ಶಿಕ್ಷಣ ಉಪನ್ಯಾಸಕರು,
ಸಿದ್ಧರಾಮೇಶ್ವರ ಪದವಿಪೂರ್ವ ಕಾಲೇಜು,
ಮಲ್ಲಪ್ಪನಹಳ್ಳಿ, ಹೊಸದುರ್ಗ ರಸ್ತೆ.

ಭಾರತ ಸ್ವಾತಂತ್ರ್ಯಗಳಿಸಿ ೫೬ ಸಂವತ್ಸರಗಳು ಕಳೆದಿವೆ. ಆದರೂ ನಾವು ರಾಷ್ಟ್ರೀಯ ಭಾವೈಕ್ಯತೆಯನ್ನು ಸಾಧಿಸಿದ್ದೇವೆಯೆ? ಎಂಬ ಈ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ. ದೇಶ ಇಂದು ಕವಲುದಾರಿಯಲ್ಲಿದೆ. ದೇಶದ ಮುಂದೆ ನೂರಾರು ಸಮಸ್ಯೆಗಳಿವೆ. ದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ನೈತಿಕ, ಧಾರ್ಮಿಕ ಜೀವನ ಅಸ್ತವ್ಯಸ್ತಗೊಂಡಿದೆ. ದುಷ್ಟಶಕ್ತಿಗಳು, ಸಂಕುಚಿತ ಮನೋಭಾವನೆ ದಿನದಿಂದ ದಿನಕ್ಕೆ ಹೆಚ್ಚುತ್ತಿವೆ. "ನಾವೆಲ್ಲರೂ ಒಂದು; ಇಡೀ ದೇಶವೇ ಒಂದು" ಎಂದು ವಿಶಾಲ ಭಾವನೆ ದೂರವಾಗುತ್ತಿದೆ.

ದೇಶದ ಐಕ್ಯತೆ ಮತ್ತು ಸಮಗ್ರತೆಯ ಬಗ್ಗೆ ಪ್ರಾಮಾಣಿಕವಾಗಿ ಜನತೆ ಯೋಚಿಸುತ್ತಿಲ್ಲ. ಚಿಂತಿಸುತ್ತಿಲ್ಲ. ದೇಶದಲ್ಲಿ ಆಗಾಗ ಕೋಮುಗಲಭೆ ಗಳು, ಮತೀಯ ಘರ್ಷಣೆಗಳು, ಉಗ್ರಗಾಮಿಗಳ ಭಯೋತ್ಪಾದಕ ಚಟುವಟಿಕೆಗಳು, ನಕ್ಸಲೈಟ್‌ಗಳ ಹಾವಳಿಗಳಿಂದ ಹೆಚ್ಚು ಗಂಭೀರ ಪರಿಸ್ಥಿತಿ ಉದ್ಭವಿಸಿದಾಗ ರಾಷ್ಟ್ರೈಕ್ಯತೆ ಮತ್ತು ಭಾವೈಕ್ಯತೆಯ ಬಗ್ಗೆ ಮಾತನಾಡುತ್ತೇವೆ. ಗಂಟೆ ಗಟ್ಟಲೆ ಭಾಷಣ ಮಾಡುತ್ತೇವೆ. ಕ್ರಮೇಣ ಅದನ್ನು ಮರೆತು ಬಿಡುತ್ತೇವೆ. ಹೀಗಾಗಿ ನಮ್ಮಲ್ಲಿ ರಾಷ್ಟ್ರೈಕ್ಯತೆಯ ಪ್ರಜ್ಞೆ ಜಾಗೃತವಾಗಿ ಬೆಳೆಯಲು ಸಾಧ್ಯವಾಗಿಲ್ಲ. ಆದ್ದರಿಂದಲೇ ನೆಹರು ಅವರು ತಮ್ಮ ಭಾಷಣ ದಲ್ಲಿ ಭಾರತ ಎಂದರೆ ಏನು? ಎಂಬ ಪ್ರಶ್ನೆ ಹಾಕಿ, ಒಂದು ದೇಶ ಎಂದರೆ ಅದರ ಕಲ್ಲು-ಮಣ್ಣಲ್ಲ. ಅದರ ಜನತೆ. ನಾವು-ನೀವುಗಳೇ ಈ ದೇಶ ಎಂದಿದ್ದರು.

ಪ್ರಾಚೀನ ಕಾಲದಿಂದಲೂ ಭಾರತ ಹಲವು ಸಂಸ್ಕೃತಿಗಳ ಸಂಗಮವಾಗಿದೆ. ಹಿಂದೂಗಳು, ಕ್ರಿಶ್ಚಿಯನ್ನರು, ಮುಸಲ್ಮಾನರು, ಜೈನರು, ಬೌದ್ಧರು, ಸಿಖ್ಖರು ಮುಂತಾದ ಧರ್ಮದವರಿದ್ದಾರೆ. ನಾವು ಉತ್ತರ ಭಾರತದವರು, ನಾವು ದಕ್ಷಿಣ ಭಾರತೀಯರು, ನಾವು ಪೂರ್ವ ಭಾರತೀಯರು, ನಾವು ಪಶ್ಚಿಮ ಭಾರತೀಯರು ಎಂದೇ ಜನ ತಮ್ಮನ್ನು ಗುರುತಿಸಿಕೊಳ್ಳುವರೇ ವಿನಃ ನಾವು ಒಟ್ಟಾರೆ ಭಾರತೀಯರು ಎಂದು ಮಾನಸಿಕವಾಗಿ ಗುರುತಿಸಿಕೊಳ್ಳದಿರುವುದು ತುಂಬಾ ವಿಷಾದನೀಯ ಸಂಗತಿ ಆಗಿದೆ. ಇದರ ಜೊತೆಗೆ ಮಾತನಾಡುವ ಭಾಷೆಯ ಆಧಾರದ ಮೇಲೆ ಹಿಂದೀಗಳು, ಗುಜರಾತಿಗಳು, ಮಲೆಯಾಳಿಗಳು, ಮರಾಠಿಗರು, ತೆಲುಗರು, ತಮಿಳರು, ಕನ್ನಡಿಗರು ಇದ್ದಾರೆ. ಹಿಂದುಳಿದವರು, ಮುಂದುವರೆದವರಿದ್ದಾರೆ. ಹಳ್ಳಿಗಳು-ಪಟ್ಟಣಿಗರಿದ್ದಾರೆ. ಲಿಂಗಾಯಿತರು, ಗೌಡರು, ಯಾದವರು, ಬ್ರಾಹ್ಮಣರಿದ್ದಾರೆ. ಹೀಗೆ ಪ್ರತ್ಯೇಕತೆಯನ್ನು ತೋರಿಸುತ್ತಾ ಹೋದರೆ ಇದಕ್ಕೆ ಕೊನೆ ಇದೆಯೇ? ಈ ಭೇದ-ಭಾವದಲ್ಲಿ ನಿಜವಾದ ಭಾರತೀಯರೇ ಕಾಣಿಸುತ್ತಿಲ್ಲ. ರಾಷ್ಟ್ರೀಯ ಮನೋಭಾವನೆ ಇಲ್ಲ. ರಾಷ್ಟ್ರೀಯ ಜೀವನಧಾರೆ ಇಲ್ಲ. ಧರ್ಮ-ಜಾತಿ ಹೆಸರಿನಲ್ಲಿ ಸಮಾಜ ಇಬ್ಭಾಗಗೊಂಡಿದೆ. ವಿಶೇಷ ಸವಲತ್ತುಗಳನ್ನು ಕೆಲವು ವರ್ಗದ ಜನರಿಗೆ ನೀಡಲು ಸಂವಿಧಾನಕ್ಕೆ ತಿದ್ದುಪಡಿ ಮಾಡಿ ಜಾತಿಯನ್ನು ಒಂದು ಆಧಾರಿತ ಅಂಶವನ್ನಾಗಿ ಮಾಡಿದೆ. ಉದಾಹರಣೆಗೆ, ಹಾವನೂರ್ ಆಯೋಗ, ಮಂಡಲ ಆಯೋಗ. ಇದರಿಂದಾಗಿ ಜಾತಿ-ಜಾತಿಗಳ ನಡುವೆ ಭಿನ್ನಾಭಿಪ್ರಾಯಗಳು ಬೆಳೆದು ಜಾತಿ ಸಂಘರ್ಷ ತಲೆ ಎತ್ತಿ ನಿಂತಿದೆ. ಇದರ ಪರಿಣಾಮ ದೇಶದಾದ್ಯಂತ ಒಂದಲ್ಲಾ ಒಂದು ರೀತಿಯ ಸಮಸ್ಯೆಗಳು ಉದ್ಭವವಾಗುತ್ತವೆ. ಅವುಗಳ ಪರಿಹಾರಕ್ಕೆ ಕಾಲಕಾಲಕ್ಕೆ ಅನೇಕ ಋಷಿಗಳು, ಸಂತರು, ತತ್ವಜ್ಞಾನಿಗಳು, ಧಾರ್ಮಿಕ ಮುಖಂಡರು, ದೇಶಭಕ್ತರು, ಕವಿಗಳು, ಸಾಹಿತಿಗಳು, ಕಲಾವಿದರು ತಮ್ಮ ತಮ್ಮ ಕಾಯಕ-ಬರವಣಿಗೆಯ ಮೂಲಕ ಭಾವೈಕ್ಯತೆಯನ್ನು ಬೆಳೆಸಲು ಪ್ರಯತ್ನಿಸಿದವರಲ್ಲಿ ಗುರುನಾನಕ್, ಕಬೀರ್‌ದಾಸ್, ತುಲಸೀದಾಸ್, ಮೀರಾಬಾಯಿ, ರಾಜಾರಾಮ ಮೋಹನರಾಯ್, ದಯಾನಂದ ಸರಸ್ವತಿ, ಪರಮಹಂಸ, ವಿವೇಕಾನಂದ, ಇಕ್ಬಾಲ್, ಭಗತ್‌ಸಿಂಗ್, ತಿಲಕ್, ಅರವಿಂದರು, ಗಾಂಧೀಜಿ ಮುಂತಾದ ಮಹನೀಯರು ಜನರಲ್ಲಿ ಭಾವೈಕ್ಯತೆಯ ಅರಿವನ್ನು ಜಾಗೃತಗೊಳಿಸುವಲ್ಲಿ ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ.

ಶಂಕರಾಚಾರ್ಯರು ದೇಶದ ನಾಲ್ಕು ಮೂಲೆಗಳಲ್ಲಿ ಸಂಚರಿಸಿ-ಪೂರ್ವದಲ್ಲಿ ಪುರಿ, ಉತ್ತರದಲ್ಲಿ ಬದರೀನಾಥ, ಪಶ್ಚಿಮದಲ್ಲಿ ದ್ವಾರಕ ಮತ್ತು ದಕ್ಷಿಣದಲ್ಲಿ ಕಂಚಿ - ಧಾರ್ಮಿಕ ಪೀಠಗಳನ್ನು ಸ್ಥಾಪಿಸುವುದರ ಮೂಲಕ ದೇಶದ ಜನರಲ್ಲಿ ಏಕತೆ-ಭಾವೈಕ್ಯತೆಯನ್ನು ಮೂಡಿಸಲು ಪ್ರಯತ್ನಿಸಿದರು.

ಭಾರತೀಯರಲ್ಲಿ ರಾಷ್ಟ್ರೀಯ ಮನೋಭಾವ ಇಲ್ಲದಿದ್ದು ದರಿಂದಲೇ ಅಲೆಕ್ಸಾಂಡರ್ ಭಾರತಕ್ಕೆ ಬಂದದ್ದು, ಮಧ್ಯಯುಗದಲ್ಲಿ ಮುಸ್ಲಿಂರು ಭಾರತಕ್ಕೆ ದಂಡೆತ್ತಿ ಬಂದದ್ದು, ಕೊನೆಗೆ ಬ್ರಿಟಿಷರು ವ್ಯಾಪಾರಕ್ಕೆಂದು ಬಂದವರು ತಮ್ಮ ಚಕ್ರಾಧಿಪತ್ಯವನ್ನು ಸ್ಥಾಪಿಸಿ ನಮ್ಮನ್ನೂ ಧೀರ್ಘಕಾಲ ಆಳಿದರು. ಇದಕ್ಕೆ ಕಾರಣ ನಮ್ಮಲ್ಲಿ ಏಕತೆ, ಐಕ್ಯತೆ, ಸಮಗ್ರತೆ, ಭಾವೈಕ್ಯತೆ ಇಲ್ಲದೆ ನಾವು ಭಾರತೀಯರು, ನಮ್ಮ ದೇಶ ಭಾರತ ಎಂದು ಮರತದ್ದೇ ನಾವು ಪರಕೀಯರ ಆಳ್ವಿಕೆಗೊಳಗಾಗಿ ಗುಲಾಮರಾಗ ಬೇಕಾಯಿತು. ಬಾಲಗಂಗಾಧರ ತಿಲಕರು ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಗಣಪತಿ ಉತ್ಸವ ಆಚರಣೆಯ ಮೂಲಕ ರಾಜಕೀಯ ಪ್ರಜ್ಞೆಯನ್ನು ಮೂಡಿಸಲು ಪ್ರಯತ್ನಿಸಿದರು.

ಸ್ವಾತಂತ್ರ್ಯ ಬಂದ ಮೇಲೆ ರಾಷ್ಟ್ರ-ಭಾವ-ಐಕ್ಯ ಎಂಬ ಈ ಮೂರು ಪದಗಳನ್ನು ಮೇಲಿಂದ ಮೇಲೆ ಕೇಳುತ್ತಿದ್ದೇವೆ. ಹಸಿವಾದಾಗ ಊಟ, ಬಾಯಾರಿಕೆಯಾದಾಗ ನೀರಿನ ನೆನಪು ಬರುವಂತೆ ಸಮಾಜದಲ್ಲಿ ಕ್ಷೋಭೆ, ಅಶಾಂತಿ ತಲೆದೋರಿದಾಗ ರಾಷ್ಟ್ರೈಕ್ಯತೆಯ ನೆನಪು ಬರುತ್ತದೆ.

ರಾಷ್ಟ್ರೈಕ್ಯದ ತಳಹದಿ ಭಾವೈಕ್ಯತೆ. ಭಾವೈಕ್ಯತೆಯ ಬೀಜ ರಾಷ್ಟ್ರೈಕ್ಯದ ಫಸಲನ್ನು ನೀಡುತ್ತದೆ. ಒಬ್ಬ ವ್ಯಕ್ತಿ ಭಾವೈಕ್ಯತೆಯನ್ನು ಸಾಧಿಸದಿದ್ದರೆ, ನೆರೆಹೊರೆಯವರೊಡನೆ ಸಾಮರಸ್ಯದಿಂದ ಬದುಕದಿದ್ದರೆ, ಕುಟುಂಬದ ಸದಸ್ಯರೊಡನೆ ಹೊಂದಿಕೊಂಡು ಬಾಳದಿದ್ದರೆ, ಅಕ್ಕ-ಪಕ್ಕದ ರಾಜ್ಯಗಳ ಜನತೆಯೊಂದಿಗೆ ಮಾನಸಿಕ ಐಕ್ಯತೆಯನ್ನು ಸಾಧಿಸುವುದಾದರೂ ಹೇಗೆ ? ಇದಕ್ಕೆ ಭಾವನಾ ಪ್ರಭುದ್ಧತೆ ಅಗತ್ಯ.

ಸಮಗ್ರತೆ ಎಂದರೆ ರಾಷ್ಟ್ರ ನಿರ್ಮಾಣದಲ್ಲಿ ಜಾತಿ, ಜನಾಂಗ, ಭಾಷೆ, ಪ್ರಾಂತೀಯ ಅಂಶಗಳಿಂದ ವಿಭಜಿಸುವ ತೊಡಕನ್ನು ದೂರೀಕರಿಸಿ ಒಗ್ಗಟ್ಟು ಹಾಗೂ ಭಾವೈಕ್ಯತೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದು.

'ದೇಶದ ಜನರೆಲ್ಲರೂ ಒಂದೇ' ಎಂಬ ಭಾವನೆಯೇ ರಾಷ್ಟ್ರೀಯ ಭಾವೈಕ್ಯತೆ. ಈ ರಾಷ್ಟ್ರೀಯ ಭಾವೈಕ್ಯತೆಯಿಂದ ರಾಷ್ಟ್ರೈಕ್ಯತೆಯು ಬೆಳೆಯುತ್ತದೆ. ರಾಷ್ಟ್ರದ ಎಲ್ಲಾ ಜನತೆಯು ಯಾವುದೇ ರೀತಿಯ ಜಾತೀಯತೆ, ಮತ್ತು ಧರ್ಮ-ಪಂಥಗಳ ಭೇದ-ಭಾವ ತೋರಿಸದೇ ಎಲ್ಲರೂ ಒಂದೇ ಎಂಬ ವಿಶಾಲ ಮನೋಭಾವನೆಯನ್ನು ಬೆಳೆಸಿಕೊಳ್ಳುವುದೇ ರಾಷ್ಟ್ರೈಕ್ಯತೆಯ ಅರ್ಥವಾಗಿದೆ. ವ್ಯಕ್ತಿಗಳೆಲ್ಲರೂ ಪರಸ್ಪರ ಒಬ್ಬರನ್ನೊಬ್ಬರು ಅರಿತುಕೊಂಡು ಗೌರವಿಸಿಕೊಂಡು ಹೋದಾಗ ಮಾತ್ರ ರಾಷ್ಟ್ರೈಕ್ಯತೆ ಸಾಧ್ಯ. ಭಾರತ ವೈವಿಧ್ಯತೆಯಿಂದ ಕೂಡಿರುವ ದೇಶವಾದ್ದರಿಂದ ಇಲ್ಲಿ ರಾಷ್ಟ್ರೈಕ್ಯತೆ ಅವಶ್ಯಕ. ಭಾಷೆ, ಮತ, ಧರ್ಮ, ಸಂಸ್ಕೃತಿ ಎಲ್ಲವೂ ವೈವಿಧ್ಯತೆಯಿಂದ ಕೂಡಿರುವ ಈ ದೇಶದಲ್ಲಿ ಐಕ್ಯತೆ ಇಲ್ಲದೇ ಹೋದರೆ ಅಶಾಂತಿ, ಅಶಿಸ್ತು ತಲೆದೋರುತ್ತದೆ. ಅಷ್ಟೇ ಅಲ್ಲ ಪ್ರಜಾಪ್ರಭುತ್ವದ ಉಳಿವಿಗೆ ರಾಷ್ಟ್ರೈಕ್ಯತೆ ಅವಶ್ಯಕವಾಗಿರುವುದರಿಂದಲೇ ಡಾ. ಎಸ್. ರಾಧಾಕೃಷ್ಣನ್ ಅವರು ರಾಷ್ಟ್ರೀಯ ಭಾವೈಕ್ಯತೆಯನ್ನು ಇಟ್ಟಿಗೆ ಮತ್ತು ಗಾರೆಯಲ್ಲಾಗಲಿ ಕಟ್ಟಲಾಗುವುದಿಲ್ಲ. ಅದು ಜನರ ಮನಸ್ಸು ಮತ್ತು ಹೃದಯದಲ್ಲಿ ನಿಶಬ್ದವಾಗಿ ಬೆಳೆಯಬೇಕು. ಹಾಗೆ ಮಾಡುವ ಒಂದೇ ವಿಧಾನ ಎಂದರೆ ಶಿಕ್ಷಣ ವಿಧಾನ.

ಪ್ರೊ. ಹುಮಾಯೂನ್ ಕಬೀರ್ ಅವರು ರಾಷ್ಟ್ರೈಕ್ಯತೆಯು ಜನಾಂಗದ ಮೇಲಾಗಲಿ, ಭಾಷೆಯ ಮೇಲಾಗಲಿ, ಮತದ ಮೇಲಾಗಲಿ, ಭೂ ಲಕ್ಷಣದ ಮೇಲಾಗಲಿ ಅವಲಂಬಿತವಾಗಿಲ್ಲ. ಆದರೆ ಅದು ಒಂದು ದೇಶಕ್ಕೆ ಸೇರಿದವರೆಂಬ ಭಾವನೆಯ ಮೇಲೆ ನಿಂತಿದೆ.

ನೆಹರು ಅವರು ರಾಜಕೀಯ ಐಕ್ಯತೆಯು ಈಗಾಗಲೇ ನಡೆದು ಹೋಗಿದೆ. ಆದರೆ ನಮಗೆ ಈಗ ಬೇಕಾಗಿರುವುದು ಜನತೆಯ ಭಾವೈಕ್ಯ. ಆದರಿಂದ ನಾವು ಒಂದು ಪ್ರಬಲ ರಾಷ್ಟ್ರವಾಗಿ ಬೆಸೆಯಲ್ಪಡಬಹುದು. ಹಾಗೂ ಆದೇ ಸಮಯದಲ್ಲಿ ನಮ್ಮ ಎಲ್ಲ ಅದ್ಭುತ ವೈವಿಧ್ಯತೆಯನ್ನು ಉಳಿಸಿಕೊಳ್ಳಬಹುದು.

ಸಿ.ಡಿ. ದೇಶ್‌ಮುಖ್ ಅವರು ರಾಷ್ಟ್ರೈಕ್ಯತೆಯನ್ನು ಶಾಸನ, ಕಾಯದೆ, ಕಾನೂನುಗಳಿಂದ ಬೆಳೆಯಲು ಸಾಧ್ಯವಿಲ್ಲ. ವ್ಯಕ್ತಿಯ ಅಂತರಾಳದಿಂದ ಈ ಭಾವನೆ ಉದ್ಭವಿಸಬೇಕು.

ರಾಷ್ಟ್ರೈಕ್ಯದ ತಳಹದಿ ಭಾವೈಕ್ಯ. ಭಾವೈಕ್ಯ ಎಂದರೆ ರಾಷ್ಟ್ರಗೌರವ ಭಾವನೆ ಮತ್ತು ರಾಷ್ಟ್ರದ ಹಿರಿತನದಲ್ಲಿ ಅಚಲ ವಿಶ್ವಾಸ ಇರಬೇಕು. ನಾವು ಒಂದು ನೆಲಕ್ಕೆ ಸೇರಿದವರೆಂಬ ಭಾವನೆ ಮತ್ತು ಕ್ರಿಯೆಗಳಿಂದ ವ್ಯಕ್ತವಾದಾಗ ಮಾತ್ರ ಭಾವೈಕ್ಯದಿಂದ ರಾಷ್ಟ್ರೈಕ್ಯವನ್ನು ಸಾಧಿಸಬಹುದು.

ಐಕ್ಯತೆ ಎಂದರೆ ಸಂಪೂರ್ಣ ಏಕರೂಪವಾಗಿರಬೇಕೆಂದೇನೂ ಅಲ್ಲ. ಜನರು ಯಾವುದೇ ಧರ್ಮವಾಗಿರಲಿ, ನಂಬಿಕೆ ಪಡೆದಿರಲಿ, ರಾಜಕೀಯ ದೃಷ್ಟಿಕೋನ ಹೊಂದಿರಲಿ, ತಾವು ಭಾರತೀಯರೆಂಬ ಭಾರತೀಯತೆಯನ್ನು ಕಾಣಬೇಕೆಂಬುದೇ ರಾಷ್ಟ್ರೈಕ್ಯದ ಧ್ಯೇಯ. ಭಾರತ ವೈವಿಧ್ಯತೆಯನ್ನು ಹೊಂದಿದೆ. ಈ ವೈವಿಧ್ಯತೆಯಲ್ಲಿ ಏಕತೆಯನ್ನು ನಾವು ಭಾವೈಕ್ಯತೆಯ ಮೂಲಕ ಸಾಧಿಸಬೇಕಾಗಿದೆ. ಭಾವೈಕ್ಯತೆ ರಾಷ್ಟ್ರೈಕ್ಯತೆಯ ತಾರಕಮಂತ್ರವಾಗಬೇಕು. ಒಬ್ಬರ ನೋವು-ನಲಿವು, ಕಷ್ಟ-ಸುಖ ಇನ್ನೊಬ್ಬರ ಸಾಧನೆಯಲ್ಲಿ ಕಾಣುತ್ತಿರಬೇಕು. ಆಗ ಭಾವೈಕ್ಯತೆ ಬೆಳೆಯಲು ಸಾಧ್ಯವಾದೀತು.

ಇತ್ತೀಚಿನ ದಿನಗಳಲ್ಲಿ ಜಾತಿ, ಧರ್ಮ, ಮತ, ನೆಲ, ಜಲ, ಭಾಷೆ..... ಇವುಗಳ ಹೆಸರಿನಲ್ಲಿ ಜನ ಸಂಕುಚಿತ ಮನೋಭಾವದವರಾಗಿದ್ದಾರೆ. ಪರಸ್ಪರ ದ್ವೇಷ, ಅಸೂಯೆ, ಅತೃಪ್ತಿ, ಕ್ರೌರ್ಯ, ಹಿಂಸೆ, ಕೋಮು-ಮತೀಯ ಗಲಭೆ, ಭ್ರಷ್ಟಾಚಾರ, ಸ್ವಾರ್ಥ..... ಇತ್ಯಾದಿ ಕಾರಣಗಳಿಂದಾಗಿ ದೇಶದ ಏಕತೆಗೆ ಭಂಗ ಬಂದಿದೆ. ಇವುಗಳ ಜೊತೆಗೆ ಗಡಿ ಸಮಸ್ಯೆ, ಕಾವೇರಿ ನೀರಿನ ಸಮಸ್ಯೆ, ಆಲಮಟ್ಟಿ ಅಣೆಕಟ್ಟಿನ ಸಮಸ್ಯೆ, ಅಯೋಧ್ಯೆ ಸಮಸ್ಯೆ ಇವು ಜೀವಂತ ಜ್ವಲಂತ ಸಮಸ್ಯೆಗಳಾಗಿವೆ. ಇವುಗಳಿಂದಾಗಿ ಅಶಾಂತಿ ಸಮಾಜದಲ್ಲಿ ದಿನೇ ದಿನೇ ಹೆಚ್ಚುತ್ತದೇ ವಿನಃ ವ್ಯಕ್ತಿ-ವ್ಯಕ್ತಿಗಳ ನಡುವಣ ಸಾಮರಸ್ಯ ಬೆಳೆಯುವುದಿಲ್ಲ. ಪರಸ್ಪರ ಸ್ನೇಹ, ವಿಶ್ವಾಸ, ಗೌರವ ಮೂಡುವುದಿಲ್ಲ, ಮಾನವೀಯ ಮೌಲ್ಯಗಳು ಮೂಲೆಗುಂಪಾಗಿವೆ. ಪ್ರೀತಿ, ಕರುಣೆ, ಸಹೋದರತ್ವ ಭಾವನೆಗಳು ಬೆಳೆಯದೇ ಹೋದರೆ ಪರಸ್ಪರ ಒಬ್ಬರೊಬ್ಬರ ಹೃದಯ-ಮನಸ್ಸುಗಳು ಒಂದಾಗುವುದಿಲ್ಲ. ಕೊನೆಗೆ ಸಂದೇಹ, ಅಪನಂಬಿಕೆ, ಹಗೆತನ ಹೆಚ್ಚಾಗುತ್ತದೆಯೇ ವಿನಃ ಎಂದಿಗೂ ರಾಷ್ಟ್ರವು ಐಕ್ಯತೆ, ಭಾವೈಕ್ಯತೆ, ಸಮಗ್ರತೆ ಹೊಂದುವುದು ಸಾಧ್ಯವಿಲ್ಲ. ಆದ್ದರಿಂದಲೇ ಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಹೀಗೆ ಹೇಳಿದ್ದಾರೆ.

*''ಅಯೋ ನನ್ನ ದೇಶವೇ*
*ಏನಾಗಿದೆ ನಿನಗೆ ?*
*ಯಾಕೆ ಹೀಗೆ ಹೋಯ್ದಾಡುವೆ*
*ಅಸ್ಪಷ್ಟತೆಯೊಳಗೆ''*

ಎಂದು ಆರ್ತತೆಯಿಂದ ಕೇಳುವಂತಾಗಿದೆ. ಶಾಂತಿ-ಸಮಾದಾನಗಳಿಗೆ ತವರಾಗಿದ್ದ, ಪ್ರೀತಿಯ ಅಮೃತ ಹೊಳೆ ಸದಾ ಹರಿಯುತ್ತಿದ್ದ ಈ ರಾಷ್ಟ್ರದಲ್ಲಿ ಹಾಲಾಹಲ ತುಂಬಿಕೊಳ್ಳುತ್ತಿದೆ. ಇದಕ್ಕೆ ಕೊನೆ ಇಲ್ಲವೇ? ಎಂಬ ಪ್ರಶ್ನೆ ಎಲ್ಲರಲ್ಲೂ ಕಾಡುತ್ತಿದೆ. ಆದುದರಿಂದಲೇ ಗಾಂಧೀಜಿಯವರು 'ಇಂದು ನಮ್ಮ ನೋಟ ಕಲುಷಿತವಾಗಿದೆ. ಆಲೋಚನೆಗಳು ಮತ್ತಷ್ಟು ಕಲುಷಿತವಾಗಿವೆ. ನಮ್ಮ ದೇಹಗಳಂತೂ ಅತ್ಯಂತ ಹೆಚ್ಚಾಗಿ ಕಲುಷಿತವಾಗಿವೆ' ಎಂದು ಹೇಳಿರುವ ಮಾತುಗಳು ಇಂದಿನ ಸಂದರ್ಭದಲ್ಲಿ ಅತ್ಯಂತ ಸತ್ಯವಾಗಿವೆ.

ತಿಳಿವಿನ ಮೂಲಕ ಪರಸ್ಪರ ಅರಿಯುವುದು. ಅರಿತು ಒಂದಾಗಿ ಬಾಳುವುದು ಭಾರತೀಯರ ಜೀವನ ಸೂತ್ರ. ಕೂಡಿ ಬಾಳಿ, ಕೂಡಿ ಉಂಡು, ಕೂಡಿ ಕೆಲಸ ಮಾಡಿ, ಕೂಡಿ ಅಧ್ಯಯನ ಮಾಡಿ ತೇಜಸ್ವಿಗಳಾಗಿ ಬಾಳೋಣ. ನಮ್ಮ ನಮ್ಮಲ್ಲಿ ದ್ವೇಷಬೇಡ ಎಂದು ಉಪನಿಷತ್ ಹೇಳುತ್ತದೆ.

ವಿಸ್ತೀರ್ಣ ಮತ್ತು ವೈವಿಧ್ಯತೆಗಳನ್ನು ಗಮನಿಸಿದರೆ ಭಾರತ ಇದೇ ವಿಶ್ವದಲ್ಲಿಯೇ ಒಂದು ವಿಶಿಷ್ಟವಾದ ದೇಶ. ಉತ್ತರದ ಹಿಮಾಲಯದ ಉತ್ತುಂಗ ಶ್ರೇಣಿ. ಪೂರ್ವ-ಪಶ್ಚಿಮದಲ್ಲಿ ಸುತ್ತುವರಿದ ಸಮುದ್ರ, ಇವುಗಳಿಂದಾಗಿ ಭಾರತಕ್ಕೆ ಒಂದು ಭೋಗೌಳಿಕ ನಕ್ಷೆ ಸಹಜವಾಗಿ ಬಂದಿದೆ.

ಸ್ವಾತಂತ್ರ್ಯ ಹೋರಾಟ, ಪಾಕಿಸ್ಥಾನ, ಚೈನಾ ಮೇಲೆ ನಡೆದ ಯುದ್ಧಗಳು ಜನತೆಯನ್ನು ಒಂದುಗೂಡಿಸಲು ಸಾಧ್ಯವಾದವು. ರಾಷ್ಟ್ರೀಯ ಐಕ್ಯತೆಗೆ ಅಡ್ಡಲಾಗಿರುವ ಸಮಸ್ಯೆಗಳನ್ನು ನಿವಾರಿಸಿ ಭದ್ರವಾದ ಅಡಿಪಾಯದ ಮೇಲೆ ಜನರಲ್ಲಿ ರಾಷ್ಟ್ರೈಕ್ಯತೆ- ಭಾವೈಕ್ಯತೆ-ಸಮುಗ್ರತೆಯನ್ನು ಮೂಡಿಸಬೇಕಾಗಿದೆ. ಇದು ಶಿಕ್ಷಣದ ಉದ್ದೇಶವೂ ಆಗಿದೆ.

★







# ನಾವು ಸೇವಿಸುವ ಆಹಾರ ಹೇಗಿರಬೇಕು?

– ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು,
ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು,
ಬೆಂಗಳೂರು.

ನಾವು ಆರೋಗ್ಯವಾಗಿರಬೇಕಾದರೆ ನಾವು ಸೇವಿಸುವ ಆಹಾರ ಬಹಳ ಮುಖ್ಯ. ಪೌಷ್ಟಿಕ ಆಹಾರವನ್ನು ನಾವು ಸೇವಿಸಬೇಕು. ಪೌಷ್ಟಿಕ ಆಹಾರ ಅಂದರೆ ಮಾಂಸ, ಮೀನು, ಮೊಟ್ಟೆ ಅಂತ ಅರ್ಥವಲ್ಲ. ಬಡಬಗ್ಗರು ಸೇವಿಸುವ ರಾಗಿಮುದ್ದೆ, ಅನ್ನ, ಸೊಪ್ಪು, ಹುರುಳಿಕಾಳು ಇವುಗಳನ್ನು ಸೇರಿಸಿದರೆ ಪೌಷ್ಟಿಕ ಆಹಾರ ಎಂದು ಹೇಳಬಹುದು. ಹಾಗಾದರೆ ನಮ್ಮ ದೇಶದಲ್ಲಿ ಅಪೌಷ್ಟಿಕತೆ, ರಕ್ತಹೀನತೆ ಇವುಗಳಿಗೆ ಕಾರಣವೇನು ಎಂದು ಕೇಳಬಹುದು. ಅಪೌಷ್ಟಿಕತೆಗೆ ಕಾರಣ ಹಲವಾರು. ನಮ್ಮ ದೇಶದಲ್ಲಿ ಸಾಂಕ್ರಾಮಿಕ ರೋಗಗಳು ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅತಿಭೇದಿ, ಶ್ವಾಸಕೋಶದ ಸೋಂಕು, ದಡಾರ, ಜಂತುಹುಳು, ಕೊಕ್ಕೆಹುಳು, ಮಲೇರಿಯ, ಕ್ಷಯರೋಗ ಇತ್ಯಾದಿ. ಇಂತಹ ಸಾಂಕ್ರಾಮಿಕ ರೋಗಗಳಿಂದ ಅಪೌಷ್ಟಿಕತೆ ಉಂಟಾಗುತ್ತದೆ. ಅಪೌಷ್ಟಿಕತೆಯಿಂದ ದೇಹದಲ್ಲಿ ರೋಗ ನಿರೋಧಕ ಶಕ್ತಿ ಕಡಿಮೆಯಾಗಿ ಸಾಂಕ್ರಾಮಿಕ ರೋಗಗಳಿಗೆ ತುತ್ತಾಗುವ ಸಾಧ್ಯತೆ ಹೆಚ್ಚಾಗುತ್ತದೆ. ಅಂದರೆ ಇದೊಂದು ವಿಷಚಕ್ರ. ನಾವು ಸೇವಿಸುವ ಆಹಾರ ಪದಾರ್ಥಗಳು ಅದನ್ನು ತಯಾರುಮಾಡುವ ಕ್ರಮಗಳು, ತಯಾರಿಸಿದ ಆಹಾರ ಪದಾರ್ಥಗಳನ್ನು ಶೇಖರಿಸುವ ರೀತಿ, ದಿನಕ್ಕೆ ಆಹಾರ ಸೇವಿಸುವ ವೇಳಾಪಟ್ಟಿ, ಸೇವಿಸುವ ಆಹಾರ ಪ್ರಮಾಣ ಇವೆಲ್ಲವೂ ಮುಖ್ಯ. ಎಷ್ಟೋ ಮನೆಗಳಲ್ಲಿ ತಲೆತಲಾಂತರದಿಂದ ಬಂದಿರುವ ಹಾಗೂ ಆಳವಾಗಿ ಬೇರೂರಲ್ಪಟ್ಟಿರುವ ಮೂಢನಂಬಿಕೆಗಳು ಅಪೌಷ್ಟಿಕತೆಗೆ ಕಾರಣವಾಗಿವೆ. ಉದಾಹರಣೆ ಹುಟ್ಟಿದ ಮಗುವಿಗೆ ಪ್ರಾರಂಭಕ್ಕೆ ತಾಯಿ ಹಾಲು ಕುಡಿಸಬಾರದು ಹರಳೆಣ್ಣೆ, ಜೇನುತುಪ್ಪ, ಸಕ್ಕರೆ ನೀರು ಕುಡಿಸಬೇಕು. ಇಂತಹ ಅಭಿಪ್ರಾಯಗಳನ್ನು ಇಂದು ಸಹ ಅನೇಕ ಪ್ರದೇಶಗಳಲ್ಲಿ ಕಾಣಬಹುದು. ಮಕ್ಕಳಿಗೆ ಕಾಳು ತಿನ್ನಿಸಬಾರದು ಅದರಿಂದ ವಾಯು ಉಂಟಾಗುತ್ತದೆ. ಕಡಲೇಕಾಯಿಬೀಜ ತಿನ್ನಿಸಬಾರದು. ಅದರಿಂದ ಪಿತ್ತ ಉಂಟಾಗುತ್ತದೆ ಎಂಬ ಅಭಿಪ್ರಾಯಗಳು ಮನೆಮಾಡಿಕೊಂಡಿವೆ. ಇದರಿಂದ ಕಾಳುಗಳಲ್ಲಿರುವ ಕಡಲೇಕಾಯಿ ಬೀಜದಲ್ಲಿರುವ ಉತ್ತಮ ಪ್ರೋಟೀನ್ ಅಂಶ ಮಕ್ಕಳಿಗೆ ದೊರೆಯದೇ ಹೋಗುತ್ತಿದೆ. ವೈದ್ಯರು, ಆರೋಗ್ಯ ಕಾರ್ಯಕರ್ತರು, ಅಂಗನವಾಡಿ ಕಾರ್ಯಕರ್ತರು ಹುಟ್ಟಿದ ಮಗುವಿಗೆ ಅರ್ಧಘಂಟೆಯೊಗಳಗೆ ತಾಯಿ ಹಾಲು ಪ್ರಾರಂಭಿಸುವ ಬಗ್ಗೆ. ೪ ರಿಂದ ೬ ತಿಂಗಳವರೆಗೆ ತಾಯಿ ಹಾಲು ಮಾತ್ರ ಕುಡಿಸುವುದರ ಬಗ್ಗೆ ಆರೋಗ್ಯ ಶಿಕ್ಷಣ ನೀಡುತ್ತಾರೆ. ಇದೇ ರೀತಿಯಲ್ಲಿ ಗರ್ಭಿಣಿ ತಾಯಂದಿರಿಗೆ, ಹಾಲುಣಿಸುವ ತಾಯಂದಿರಿಗೆ ಅನೇಕ ಬಗೆಯ ಕಟ್ಟುನಿಟ್ಟು ಕ್ರಮಗಳನ್ನು ಗಮನಿಸಬಹುದು. ಪರಂಗಿ ಹಣ್ಣು ತಿಂದರೆ ಅಬಾರ್ಷನ್ ಆಗುತ್ತದೆ. ಉಷ್ಣ. ಬೇಳೆಕಾಳು ತಿಂದರೆ ವಾಯು, ದಂಟಿನ ಸೊಪ್ಪು ತಿಂದರೆ ಸೀತ ಇತ್ಯಾದಿ ಅನೇಕ ಬಗೆಯ ನಂಬಿಕೆಗಳು ರೂಢಿಯಲ್ಲಿವೆ. ಇದರ ಜತೆಗೆ ವೈಯಕ್ತಿಕ ಬೇಕು ಬೇಡಗಳು. ''ನನಗೆ ನುಗ್ಗೆಕಾಯಿ ಕಂಡರೆ ಆಗಲ್ಲ; ಬದಲೆಕಾಯಿ ಕಂಡರೆ ಆಗಲ್ಲ'' ಇಂತಹ ಮಾತುಗಳು ಕೇಳಿಬರುತ್ತವೆ. ಕೆಲವು ಕುಟುಂಬಗಳಲ್ಲಿ ಈರುಳ್ಳಿ, ಬೆಳ್ಳುಳ್ಳಿ ಉಪಯೋಗಿಸಲು ಕಟ್ಟುಪಾಡು. ಅನೇಕ ಪೀಳಿಗೆಗಳಿಂದ ಜಾರಿಗೆ ಬಂದಿರುವ ಈ ಅಭ್ಯಾಸಗಳ ಬಗ್ಗೆ ವೈದ್ಯರಿಗೆ, ಆರೋಗ್ಯಕಾರ್ಯಕರ್ತರಿಗೆ ತಿಳಿಸಿ ಹೇಳುವುದು ಕಷ್ಟವಾಗುತ್ತದೆ. ಇನ್ನು ಅಡಿಗೆ ಮಾಡುವ ಕ್ರಮಗಳು. ಇಂದಿಗೂ ಅನೇಕ ಮನೆಗಳಲ್ಲಿ ಪಾತ್ರೆಯಲ್ಲಿ ಅಕ್ಕಿಗೆ ಹೆಚ್ಚು ನೀರು ಹಾಕಿ ಅನ್ನ ಬೇಯಿಸಿ ಗಂಜಿಯನ್ನು ಬಸಿಯುವ ಪದ್ಧತಿ ಹಾಗೂ ಬೇಳೆ ಕಾಳುಗಳನ್ನು ಬೇಯಿಸಿ, ಬೇಯಿಸಿದ ನೀರನ್ನು ಚೆಲ್ಲುವ ಅಭ್ಯಾಸ ರೂಢಿಯಲ್ಲಿದೆ. ಈ ಅಭ್ಯಾಸದಿಂದ ಅನೇಕ ಪೋಷಕಾಂಶಗಳು ಮುಖ್ಯವಾಗಿ ವಿಟಮಿನ್ ಬಿ, ಹೊರಹಾಕಲ್ಪಟ್ಟು, ಜನರಿಗೆ ಲಭ್ಯವಾಗುತ್ತಿಲ್ಲ.

ಇನ್ನು ಆಹಾರ ಸೇವಿಸುವ ಕ್ರಮ. ಎಷ್ಟೋ ಮನೆಗಳಲ್ಲಿ ಗಂಡಸರು ಆಹಾರಸೇವಿಸದ ಹೊರತು, ಮಹಿಳೆಯರು ಮಕ್ಕಳು ಆಹಾರ ಸೇವಿಸುವಂತಿಲ್ಲ. ಎಷ್ಟೋ ಸಮಯದಲ್ಲಿ ಗಂಡಸರು, ಗಂಡು ಮಕ್ಕಳು ಆಹಾರ ಸೇವಿಸಿದ ಮೇಲೆ ಹೆಣ್ಣು ಮಕ್ಕಳಿಗೆ, ತಾಯಿಗೆ ಖಾಲಿ ಪಾತ್ರೆ ಉಳಿದು, ಪಾತ್ರೆಗೆ ನೀರು ಹಾಕಿ ಕುಡಿದು ಮಲಗಿದ ಘಟನೆಗಳು ಅನೇಕ. ಇವೆಲ್ಲ ಸಮಸ್ಯೆಗಳು ಹಳ್ಳಿಯಲ್ಲಿ ಕಂಡುಬಂದರೆ; ಪಟ್ಟಣಗಳಲ್ಲಿ ಇತ್ತೀಚೆಗೆ ವಿಭಿನ್ನ ರೀತಿಯ ಆಹಾರ ಪದ್ಧತಿ ಕಂಡುಬರುತ್ತಿದೆ. ರಸ್ತೆಯ ಅಕ್ಕಪಕ್ಕದಲ್ಲಿ ಅಲ್ಲೇ ತಯಾರಿಸಿ ಮಾರುವ ಆಹಾರಪದಾರ್ಥಗಳು. ಪಾನಿಪೂರಿ, ಮಸಾಲೆಪೂರಿ, ಪಾವ್‌ಬಾಜಿ, ಫ್ರೈಡ್‌ರೈಸ್ ಇತ್ಯಾದಿಗಳು ಯುವಜನರನ್ನು ಅತಿಯಾಗಿ ಆಕರ್ಷಿಸುತ್ತಿದೆ. ಕಡಿಮೆ ದರ್ಜೆಯ ಎಣ್ಣೆಯನ್ನು ಕುದಿಸಿ ಅದರಲ್ಲಿ ಮುಳುಗಿಸಿ ತಯಾರಿಸುವ ಕರಿದ ಪದಾರ್ಥಗಳು, ಉಸಿರುಗಟ್ಟಿಸುವ ವಾತಾವರಣ, ಧೂಳು, ನೊಣ, ನಾಯಿ, ಗೆಕ್ಕು, ಜನಜಂಗುಳಿ ಇಂತಹ ಪರಿಸರದಲ್ಲಿ ಆಹಾರ ಸೇವಿಸುವುದು ಅನಾರೋಗ್ಯಕರ. ನಮ್ಮ ದೇಹಕ್ಕೆ ಬೇಕಾಗುವ ಕ್ಯಾಲೋರಿಗಳಲ್ಲಿ ಶೇಕಡ ೧೦ ರಿಂದ ೧೫ರಷ್ಟು ಮಾತ್ರ ಕೊಬ್ಬಿನಾಂಶದಿಂದ ದೊರೆಯಬೇಕು. ಅವಸರವಾಗಿ ನುಗ್ಗಿ, ಸಿಕ್ಕಿದ್ದನ್ನು ತಿಂದು, ಅಲ್ಲೆ ಬಿಸಾಕಿ ಹೋಗುವುದು ಸಾಮಾನ್ಯವಾಗಿ ಕಂಡುಬರುವ ದೃಶ್ಯ. ಕರಿಯುವುದು, ಹುರಿಯುವುದು ಈ ವಿಧಾನಗಳಿಂದ ಅನೇಕ ವಿಟಮಿನ್‌ಗಳು ಅದರಲ್ಲೂ ಮುಖ್ಯವಾಗಿ ನೀರಿನಲ್ಲಿ ಕರಗುವ ವಿಟಮಿನ್‌ಗಳಾದ ಬಿ-ಕಾಂಪ್ಲೆಕ್ಸ್, ವಿಟಮಿನ್-ಸಿ ಇವುಗಳು ನಾಶವಾಗುತ್ತದೆ. ಯುವಜನತೆಗೆ ಈ ವಿಷಯದಲ್ಲಿ ಸೂಕ್ತ ಮಾರ್ಗದರ್ಶನ ಅಗತ್ಯ.

ರಾಗಿಮುದ್ದೆ, ಸೊಪ್ಪಿನಸಾರು ಇವುಗಳಲ್ಲಿ ಆರೋಗ್ಯ ಪಾಲನೆಗೆ ಬೇಕಾಗುವ ಕಬ್ಬಿಣದ ಅಂಶ, ಕ್ಯಾಲ್ಸಿಯಂ ಅಂಶ, ನಾರಿನ ಅಂಶ ಹೆಚ್ಚಾಗಿರುತ್ತದೆ. ಸೊಪ್ಪಿನಲ್ಲಿ ನಾರಿನ ಅಂಶ, ವಿಟಮಿನ್ ಎ, ಸಿ. ಅಂಶ ಹೆಚ್ಚಾಗಿರುತ್ತದೆ. ಮೊಳಕೆ ಕಟ್ಟಿದ ಕಾಳು, ಇಡ್ಲಿ ಇವುಗಳು ಆರೋಗ್ಯಕ್ಕೆ ಒಳ್ಳೆಯದು. ಆಹಾರದ ಬಗ್ಗೆ, ತಯಾರಿಸುವ ಬಗ್ಗೆ, ಸೇವಿಸುವ ಬಗ್ಗೆ, ಹಳ್ಳಿಗಳಲ್ಲಿ, ಶಾಲೆಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಪ್ರಾಯೋಗಿಕವಾಗಿ ಆರೋಗ್ಯ ಶಿಕ್ಷಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಇದರಿಂದ ಆರೋಗ್ಯಪಾಲನೆ ಸಾಧ್ಯ.

★

## ನಿಮಗಿದು ತಿಳಿದಿರಲಿ

ಮನೆ ವೈದ್ಯ

### ಸೌತೆಕಾಯಿ

ಎಳೆ ಸೌತೆಕಾಯಿಗಳು ತಂಪುಕಾರಕ ಮತ್ತು ಮೂತ್ರಜನಕ ಒತ್ತಡದಿಂದ ರಕ್ತನಾಳ ಹಾಗೂ ಕರುಳಿನ ಭಾಗ ಸ್ತಬ್ಧವಾದಾಗ ಇದು ನಿವಾರಿಸುತ್ತದೆ. ಅದನ್ನು ಕತ್ತರಿಸಿ ಊದಿರುವ ಭಾಗಕ್ಕೆ ಹಚ್ಚಿದರೆ ಬಾವು ಕಡಿಮೆಯಾಗುತ್ತದೆ.

### ದಾಳಿಂಬೆ

ದಾಳಿಂಬೆ ಹಣ್ಣಗೆ ಹಸಿವೆಯನ್ನುಂಟುಮಾಡುವ, ವಾಂತಿಯನ್ನು ನಿಲ್ಲಿಸುವ ಗುಣವಿದೆ. ಇದನ್ನು ಪಿತ್ತರಸ ಅಸ್ತವ್ಯಸ್ತ, ಬಾಯಾರಿಕೆ, ಜ್ವರ, ಹೃದಯರೋಗಗಳ ಚಿಕಿತ್ಸೆಯಲ್ಲಿಯೂ ಬಳಸಬಹುದು. ದಾಳಿಂಬೆಗೆ ಶಕ್ತಿವರ್ಧಕ ಗುಣವಿದೆ.

### ಬಾಳೆಹಣ್ಣು : ಅಜೀರ್ಣ

ಬಾಳೆಹಣ್ಣಗೆ ಪಚನಶಕ್ತಿ ಹೆಚ್ಚಿಸುವ ಶಕ್ತಿಯಿದ್ದರೂ ಅತಿಯಾದರೆ ಅಜೀರ್ಣ ಉಂಟುಮಾಡುತ್ತದೆ. ಇದರಿಂದ ಹೊಟ್ಟೆನೋವು, ಹೊಟ್ಟೆ ಉಬ್ಬರ ಉಂಟಾಗಬಹುದು. ಇವುಗಳ ನಿವಾರಣೆಗೆ ಎರಡು ಮೂರು ಕಾಳು ಏಲಕ್ಕಿಯ ಕಾಳನ್ನು ಅಗಿದು ತಿಂದು ಬಿಸಿ ನೀರು ಕುಡಿದರೆ ಈ ತೊಂದರೆಗಳು ನಿವಾರಣೆಯಾಗುತ್ತವೆ.

### ಈರುಳ್ಳಿ ರಸ ಮತ್ತು ಜೇನುತುಪ್ಪ

ಈರುಳ್ಳಿ ರಸ ಮತ್ತು ಜೇನುತುಪ್ಪವನ್ನು ಸಮಪ್ರಮಾಣದಲ್ಲಿ ಬೆರೆಸಿ ಕೊಟ್ಟರೆ, ಮಕ್ಕಳ ಕೆಮ್ಮು ಕಫಗಳು ಕಡಿಮೆಯಾಗುತ್ತವೆ. ಹಸಿ ಈರುಳ್ಳಿಯನ್ನು ತಿಳಿಯಾದ ಕಡೆದ ಮಜ್ಜಿಗೆಯಲ್ಲಿ ಹಾಕಿ, ರುಚಿಗೆ ಸೈಂಧವ ಲವಣವನ್ನು ಸೇರಿಸಿ ಪ್ರತಿದಿನ ತೆಗೆದುಕೊಳ್ಳುತ್ತಿದ್ದರೆ ದೇಹದಲ್ಲಿ ಕೊಬ್ಬಿನ ಅಂಶ ಕಡಿಮೆಯಾಗುತ್ತದೆ.

### ಬೆಳ್ಳುಳ್ಳಿ

ಕೈಕಾಲುಗಳಿಗೆ ಪಟ್ಟುಬಿದ್ದು ಊದಿಕೊಂಡಾಗ ಅಥವಾ ಉಳಿಕಿದಾಗ ಬೆಳ್ಳುಳ್ಳಿ ತೈಲವನ್ನು ಆ ಭಾಗಕ್ಕೆ ಹಚ್ಚಿ ಮೃದುವಾಗಿ ನೀವಿ ನಾಲ್ಕು ಗಂಟೆಗಳ ಕಾಲ ಬಿಟ್ಟು ಬಿಸಿ ನೀರಿನಿಂದ ತೊಳೆಯಬೇಕು. ಹೀಗೆ ದಿನಕ್ಕೆ ಎರಡು ಮೂರು ಬಾರಿ ಮಾಡಿದರೆ ಬೇಗನೆ ನೋವು ನಿವಾರಣೆಯಾಗಿ ಊತ ಕಡಿಮೆಯಾಗುತ್ತದೆ.





# ಮಹಿಳೆ ಮತ್ತು ಸಾಕ್ಷರತೆ

– ಬಾ.ಹ. ರಮಾಕುಮಾರಿ
ಲೇಖಕಿ,
ತುಮಕೂರು.

ಭಾರತದಲ್ಲಿ ಮಹಿಳಾ ಸಾಕ್ಷರತಾ ಪ್ರಮಾಣ ತುಂಬಾ ಕಡಿಮೆ. ೧೯೯೧ರ ಜನಗಣತಿ ಪ್ರಕಾರ ೩೯.೪% ಇದೆ. ಕರ್ನಾಟಕದಲ್ಲಿ ೪೪.೩% ಇದೆ. ಬಿಹಾರ, ರಾಜಾಸ್ತಾನ ಮುಂತಾದ ಕಡೆ ಕೇವಲ ೨೫% ಮಾತ್ರ ಇದೆ. ಕೇರಳದಲ್ಲಿ ೮೬% ಇದೆ. ಹೀಗೆ ಆಯಾ ಪ್ರದೇಶದ ಮಹಿಳಾ ಪ್ರಗತಿಗೆ ಅನುಗುಣವಾಗಿ ಈ ಪ್ರಮಾಣ ಕಂಡುಬರುತ್ತದೆ.

ಭಾರತದಲ್ಲಿ ೧೦೦ ಮಹಿಳೆಯರಲ್ಲಿ ೨೫ ಜನರಿಗೆ ಓದು ಬರಹ ತಿಳಿದಿದೆ. ಗಂಡಸರಲ್ಲಿ ೪೭ ಜನರಿಗೆ ಓದು ಬರಹ ತಿಳಿದಿದೆ. ೧೦೦೦ ಮಹಿಳೆಯರಲ್ಲಿ ೪ ಜನ ಗಂಡಸರಲ್ಲಿ ೧೩ ಜನ ಪದವೀಧರರು ಇರುವುದು ಕಂಡು ಬರುತ್ತದೆ.

ಪ್ರಾಥಮಿಕ ಶಿಕ್ಷಣದ ಮಹತ್ವಕ್ಕಾಗಿ ಏರ್ಪಡಿಸಿದ ಅನೇಕ ಕಾರ್ಯಕ್ರಮಗಳು, ಸಾಕ್ಷರತಾ ಆಂದೋಲನ ಮಹಿಳಾ ಶಿಕ್ಷಣದ ವಿಶೇಷ ಸೌಲಭ್ಯಗಳು ಮುಂತಾದ ಕಾರಣಗಳಿಂದ ಈ ಪ್ರಮಾಣದಲ್ಲಿ ಹೆಚ್ಚಿನ ಪ್ರಗತಿಯಾಗಿರಬಹುದು. ೨೦೦೧ರ ಗಣತಿ ವಿವರಗಳು ಲಭ್ಯವಾದರೆ ಇದುವರೆಗೂ ಆಗಿರುವ ಪ್ರಗತಿ ಹಾಗೂ ಸಾಧನೆಯ ಪ್ರತಿಫಲವನ್ನು ಗುರುತಿಸಬಹುದು.

ಇಷ್ಟೆಲ್ಲ ಆಗುತ್ತಿದ್ದರೂ, ಅನೇಕ ಮಹಿಳೆಯರು ಪುರುಷರಂತೆಯೇ ಸಮಾನವಾಗಿ ಎಲ್ಲಾ ಕ್ಷೇತ್ರಗಳಲ್ಲಿ ಪಾಲ್ಗೊಳ್ಳುತ್ತಿದ್ದರೂ ಸಾಧನೆಯ ತುತ್ತ ತುದಿಗೇರುವ ಸಾಹಸ ಮಾಡುತ್ತಿದ್ದರೂ ಸಹ ಒಂದು ಕಡೆ ಈ ಬಗ್ಗೆ ಅಭಿಮಾನ ಹೆಮ್ಮೆ ಉಂಟಾಗುತ್ತಿದ್ದರೂ ಮಹಿಳೆಯರ ಬಹುಪಾಲು ಸ್ಥಿತಿ ಶತಮಾನಗಳಿಂದಲೂ ದಾರುಣವಾಗಿಯೇ ಉಳಿದಿರುವುದನ್ನು ಇಂದಿಗೂ ಕಾಣುತ್ತಿದ್ದೇವೆ. ಪರರ ಸುಖ ಸಂತೋಷದಲ್ಲಿ ತನ್ನ ಬದುಕಿನ ಸಾರ್ಥಕತೆಯನ್ನು ಕಂಡುಕೊಂಡು ದುಡಿಮೆಯ ನೊಗಕ್ಕೆ ಹೆಗಲು ಕೊಟ್ಟು ಗಾಣದೆತ್ತಿನಂತೆ ದುಡಿಯುವವಳಾಗಿದ್ದಾಳೆ. ದೇವದಾಸಿ, ಬಸವಿ ಬೆತ್ತಲೆ ಸೇವೆ ಮುಂತಾದ ಅಮಾನವೀಯ ಆಚರಣೆಗೆ ಇಂದಿಗೂ ಬಲಿಯಾಗುತ್ತಿರುವುದು ಒಂದೆಡೆಯಾದರೆ, ಆಧುನಿಕ ಹೈಟೆಕ್ ತಂತ್ರ ಅಥವಾ ಹೊಸ ನಮೂನೆಯ ಸೇವೆ ಹೆಸರಿನಲ್ಲಿ ಹೆಣ್ಣಿನ ಮೈ-ಮನಸ್ಸು ಶೋಷಿವಾಗುತ್ತಿದೆ. ಸಾಮಾಜಿಕ ಜೀವನ ಸಂಸಾರ ಕುಟುಂಬ ಜೀವನದ ನಡುವೆಯೂ ಭದ್ರತೆ ರಕ್ಷಣೆ ಇಲ್ಲದೇ ವರದಕ್ಷಿಣೆ, ಅತ್ಯಾಚಾರ, ಕೌಟುಂಬಿಕ ಹಿಂಸೆಗಳಿಗೆ ಸಿಲುಕಿ ನರಳುತ್ತಿದ್ದಾಳೆ. ಇಂತಹ ಕ್ರೂರ ಕರಾಳತನಗಳಿಗೆ ಬಹು ಮುಖ್ಯಕಾರಣ ಅಜ್ಞಾನ, ಅನಕ್ಷರತೆ, ಮೂಢನಂಬಿಕೆಗಳಾಗಿವೆ :

ಮಹಿಳಾ ಅನಕ್ಷರತೆಗೆ ಕಾರಣಗಳು :

೧. ಹೆಣ್ಣುಮಕ್ಕಳು ಓದಿ ಏನಾಗಬೇಕು ಎಂಬ ಧೋರಣೆ.
೨. ಬಡತನದ ಕಾರಣಗಳಿಂದ ದುಡಿಮೆಗೆ ಸೇರುವುದು.
೩. ಬಾಲ್ಯ ವಿವಾಹ.
೪. ತಂದೆ-ತಾಯಿ ಅನಕ್ಷರಸ್ಥರಾಗಿರುವುದು.
೫. ಮನೆಯಲ್ಲಿನ ಚಿಕ್ಕಮಕ್ಕಳನ್ನು ನೋಡಿಕೊಳ್ಳುವುದು.
೬. ಮನೆಗೆಲಸದಲ್ಲಿ ನೆರವಾಗುವುದು.
೭. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಕಡಿಮೆ ಅವಕಾಶಗಳಿರುವುದರಿಂದ ಮಧ್ಯದಲ್ಲಿಯೇ ಶಾಲೆ ಬಿಡುವುದು, ಮುಂತಾದವು

ಮಹಿಳೆಯರನ್ನು ಶಿಕ್ಷಣದಲ್ಲಿ ತೊಡಗಿಸುವುದು ಹೇಗೆ?

ಮೇಲಿನ ಕಾರಣಗಳಿಂದ ಶಿಕ್ಷಣ ವಂಚಿತರಾದ ಮಹಿಳೆಯರಿಗೆ ಶಿಕ್ಷಣ ದೊರಕುವಂತೆ ಮಾಡಲು ಅನೇಕ ಯೋಜನೆಗಳಿವೆ. ಅವುಗಳತ್ತ ಮಹಿಳೆಯರ ಗಮನವನ್ನು ಆಕರ್ಷಿಸಬೇಕು.

೧. ಮಹಿಳೆಯರ ಸ್ಥಿತಿಗತಿ ಅಥವಾ ಸ್ಥಾನಮಾನದ ಬಗ್ಗೆ ಅರಿವು ಮೂಡಿಸುವುದು.
೨. ಶಿಕ್ಷಣದ ಮಹತ್ವವನ್ನು ಮನವರಿಕೆ ಮಾಡುವುದು.
೩. ಅನೌಪಚಾರಿಕ ಶಿಕ್ಷಣ ಪಡೆಯುವಂತೆ ಪ್ರೇರೇಪಿಸುವುದು.

೪. ಸಣ್ಣಕುಟುಂಬದ ಅರಿವು ಉಂಟು ಮಾಡುವುದು.

೫. ಸ್ವಾವಲಂಬನೆ ಮತ್ತು ಅಭಿವೃದ್ಧಿ ಪಥದೆಡೆಗೆ ಸಾಗುವ ಹೆದ್ದಾರಿ ಶಿಕ್ಷಣ ಎಂಬುದನ್ನು ತೋರಿಸಿ ಕೊಡುವುದು. ಇವೆಲ್ಲವುಗಳನ್ನು ಸಂಘಟನಾತ್ಮಕವಾಗಿ ಮಾತ್ರ ಮಹಿಳೆಯರಿಗೆ ತಲುಪಿಸಲು ಸಾಧ್ಯ.

''ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ'' ಎಂಬಂತೆ ಶಿಕ್ಷಣ ಪಡೆದ ಮಹಿಳೆಯಿಂದ ಇಡೀ ಕುಟುಂಬದ ಅಭಿವೃದ್ಧಿಯಾಗುತ್ತದೆ.

ಔಪಚಾರಿಕ ಶಾಲೆಗಳಲ್ಲಿ ಕಲಿಯಲು ಅವಕಾಶವಿಲ್ಲದ ಶಿಕ್ಷಣ ವಂಚಿತ ಮಹಿಳೆಯರಿಗೆ, ಸಾಕ್ಷರತಾ ಆಂದೋಲನದ ನಿರಂತರ ಕಲಿಕಾ ಕೇಂದ್ರಗಳು, ಮುಂದುವರೆದ ಶಿಕ್ಷಣಕೇಂದ್ರಗಳೇ ಶಿಕ್ಷಣ ಕೇಂದ್ರ – ಶಾಲೆಗಳಾಗುತ್ತವೆ.

***ವೃತ್ತಿ ಶಿಕ್ಷಣದ ಮೂಲಕ ಸ್ವಾವಲಂಬಿಯಾಗುವುದು***

ಸಾಂಪ್ರದಾಯಕ ಶಿಕ್ಷಣ ವಂಚಿತರಾದವರಿಗೆ ಶಾಲೆ ಬಿಟ್ಟವರು, ನವಸಾಕ್ಷರರು, ಕಲಿಯದೇ ಇರುವವರು ಕೆಲವು ತರಗತಿಗಳನಷ್ಟೇ ಓದಿದ ಮತ್ತು ಮಧ್ಯದಲ್ಲಿ ಶಾಲೆ ಬಿಟ್ಟವರು ಶಾಲೆಗೆ ಹೋದರೂ ಶಾಲೆ ಮುಖ ನೆನಪಿಲ್ಲದಂತಾಗಿರುವವರೂ ಮುಂತಾದವರಿಗೆಲ್ಲಾ ಅಲ್ಪಾವಧಿಯ ವೃತ್ತಿ, ಕರಕುಶಲಕಲೆ, ತರಬೇತಿ, ನೈಪುಣ್ಯತೆ ನೀಡುವಂತಹ ತರಬೇತಿ ಕಲ್ಪಿಸಿಕೊಡುವ ಮೂಲಕ ಸ್ವ-ಉದ್ಯೋಗ ಮಾಡಲು ವೃತ್ತಿಯಲ್ಲಿ ತೊಡಗಲು ಅವಕಾಶ ಇದರಿಂದ ಸಾಧ್ಯವಾಗಿದೆ.

ಆಧುನಿಕ ಬದುಕಿನ ಅಗತ್ಯಕ್ಕನುಗುಣವಾದ ಅನೇಕ ಕುಶಲತೆಗಳನ್ನು ಪಡೆದುಕೊಂಡು ಮಹಿಳೆಯರು ದುಡಿಮೆಯ ಮಾರ್ಗ ಕಂಡುಕೊಳ್ಳುವ ಅವಕಾಶ ಇದರಿಂದಾಗಿದೆ. ಅದರಲ್ಲೂ ಕೆಳಮಧ್ಯಮ ವರ್ಗದ ಹೆಣ್ಣುಮಕ್ಕಳು, ಗೃಹಿಣಿಯರು, ಬಡವರ್ಗದವರು ಆತ್ಮವಿಶ್ವಾಸದಿಂದ ಮುಂದೆ ಬರಬೇಕು, ಜೀವನಮಾರ್ಗ ಕಂಡುಕೊಳ್ಳಬೇಕೆನ್ನುವವರಿಗೆ ಇದು ಸದಾ ತೆರೆದ ಬಾಗಿಲಾಗಿದೆ.

ಹೀಗೆ ಅನೇಕ ರೀತಿಯಲ್ಲಿ ಅನೌಪಚಾರಿಕ ಶಿಕ್ಷಣ, ವೃತ್ತಿಸಾಕ್ಷರತೆ, ಕಾನೂನು ಸಾಕ್ಷರತೆ (ಅರಿವು ಮೂಡಿಸುವುದು) ಮುಂತಾದ ಅನೇಕ ಶೈಕ್ಷಣಿಕ ಪ್ರಗತಿ ಹೊಂದಿ ಮೂಲೆಗುಂಪಾಗಿದ್ದ, ಮೂಲೆಗುಂಪಾಗಬಹುದಾಗಿದ್ದ ಬಹುದೊಡ್ಡ ಸಂಖ್ಯೆಯ ಮಹಿಳೆಯರು ಸ್ವಾಧಾರಗೊಂಡಿದ್ದು ಸಾಕ್ಷರತಾ ಆಂದೋಲನದ ಸಾಧನೆಯ ಸಾಕಾರ ಎನ್ನಬಹುದು.

★

## ಶ್ರದ್ಧಾಂಜಲಿ



### ಲಿಂ. ದೊಡ್ಡಿ ರೇವಣ್ಣನವರು

ಕೃಷಿ, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಡಿಕೊಂಡು ಪ್ರಾಮಾಣಿಕತೆಯಿಂದ ಸೇವೆ ಸಲ್ಲಿಸುವುದರ ಮೂಲಕ ಜನಪ್ರಿಯರಾಗಿದ್ದ ಶ್ರೀ ದೊಡ್ಡಿ ರೇವಣ್ಣನವರು ಇತ್ತೀಚೆಗೆ ನಿಧನರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾದಿಸುತ್ತದೆ. ಎಪ್ಪತ್ತೂರು ವಸಂತಗಳ ಬೇವು-ಬೆಲ್ಲವನ್ನು ಸವಿದಿದ್ದ ಶ್ರೀ ದೊಡ್ಡಿ ರೇವಣ್ಣನವರ ನಿಧನ ಸಮಾಜಕ್ಕೆ ಭರಿಸಲಾಗದ ನಷ್ಟ.

ಪ್ರಥಮ ಬಾರಿಗೆ ೧೯೫೭ರಲ್ಲಿ ಪಂಚಾಯತ್ ಅಧ್ಯಕ್ಷರಾಗಿ ಸಾರ್ವಜನಿಕ ಸೇವೆ ಆರಂಭಿಸಿ ೧೯೭೩ರವರೆವಿಗೂ ತಮ್ಮ ಅವಧಿಯಲ್ಲಿ ಗ್ರಾಮದ ಅಭಿವೃದ್ಧಿಗೆ ಶ್ರಮಿಸಿದರು. ತರುವಾಯ ಈ ಅವಧಿಯಲ್ಲಿ ಮಾಗಡಿ ತಾಲ್ಲೂಕು ಬೋರ್ಡ್ ಸದಸ್ಯರಾಗಿ ೧೪ ವರ್ಷಗಳು ಹಾಗೂ ಟಿ.ಪಿ.ಎಂ.ಸಿ. ಸದಸ್ಯರಾಗಿ, ಮಾಗಡಿ ಪಿ.ಎಲ್.ಡಿ. ಬ್ಯಾಂಕ್ ಸದಸ್ಯ ಹಾಗೂ ಅಧ್ಯಕ್ಷರಾಗಿ, ರಾಜ್ಯ ಸರ್ಕಾರದ ರೇಷ್ಮೆ ಕೃಷಿ ಸಲಹಾ ಸಮಿತಿ ಸದಸ್ಯರಾಗಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಸದಸ್ಯರಾಗಿ, ಬೆಂಗಳೂರು ಗ್ರಾಮಾಂತರ ಸಹಕಾರ ಯೂನಿಯನ್‌ನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಪ್ರಸ್ತುತ ಬೆಂಗಳೂರು ವಿದ್ಯುತ್ ಪ್ರಸರಣ ನಿಗಮದ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದರು. ಸಾಮಾಜಿಕ ಹಾಗೂ ರೈತ ಪರ ಹಿತಚಿಂತಕರಾಗಿದ್ದ ಶ್ರೀ ರೇವಣ್ಣನವರು ಅನೇಕ ಸಂಘ-ಸಂಸ್ಥೆಗಳಲ್ಲಿ ಪದಾಧಿಕಾರಗಳಾಗಿದ್ದರು. ಅಖಿಲ ಭಾರತ ವೀರಶೈವ ಮಹಾಸಭಾದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಉಪಾಧ್ಯಕ್ಷರಾಗಿ, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಸದಸ್ಯರಾಗಿ ಮತ್ತು ದೇಗುಲಮಠ ಶಿಕ್ಷಣ ಸಂಸ್ಥೆಯ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದಾರೆ. ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅಪಾರ ಭಕ್ತ-ಗೌರವನ್ನಿಟ್ಟುಕೊಂಡಿದ್ದ ಶ್ರೀ ದೊಡ್ಡಿ ರೇವಣ್ಣನವರು ವಿವಿಧ ಮಠಗಳ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದರು. ಮಾಗಡಿ ತಾಲ್ಲೂಕಿನ ಅಭಿವೃದ್ಧಿಗೆ ಹತ್ತು ಹಲವು ಯೋಜನೆಗಳನ್ನು ಹಮ್ಮಕೊಂಡು ಅವುಗಳನ್ನು ಅನುಷ್ಠಾನಗೊಳಿಸಲು ಅಹರ್ನಿಶಿ ದುಡಿದಿದ್ದಾರೆ.

ಶ್ರೀಯುತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಕುಟುಂಬವರ್ಗದವರಿಗೆ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ದಯಾಮಯನಾದ ಪರಶಿವನು ನೀಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

★







## ಕ್ಷಣ

– ಪ್ರೇಮಾಮಲ್ಲಣ್ಣ
''ಶಾಂಭವಿ'', 3ನೇ ಅಡ್ಡರಸ್ತೆ,
ಸೋಮೇಶ್ವರಪುರ, ತುಮಕೂರು-2.

'ಕ್ಷಣ' ಕಾಲದ ಒಂದು ಪ್ರಮಾಣ. ನಾಲ್ಕು ನಿಮಿಷಗಳ ಕಾಲ, ಕ್ಷಣ ಕ್ಷಣಿಕ, ಕ್ಷಣಕಾಲ ಬೆಳಗಿ ಮಾಯವಾಗುವಂಥದ್ದು. ಕ್ಷಣದ ಬಗ್ಗೆ ಸಂಸ್ಕೃತ ಸುಭಾಷಿತವೊಂದು ಹೀಗೆ ಹೇಳುತ್ತದೆ –

*''ಪ್ರತಿಕ್ಷಣ ಮಯಂ ಕಾಲಃ ಕ್ಷೀಯಮಾಣೋ*
*ಅಮಕುಂಭ ಇವಾಂ ಭವಃ ಸ್ತೋವಿಕೀರ್ಣೋ ನ ವಿಭಾವ್ಯತೇ ಲಕ್ಷ್ಯತೇನ''*

(ಗರುಡಪುರಾಣ)

ಅಂದರೆ ಪ್ರತಿಕ್ಷಣದಲ್ಲಿಯೂ ಕಾಲ ಕಳೆದು ಹೋಗುತ್ತಿರುತ್ತದೆ. ನಮಗದರ ಅರಿವೇ ಆಗುವುದಿಲ್ಲ. ಹೇಗೆಂದರೆ ಒಂದು ಹಸಿಮಡಕೆಯನ್ನು ನೀರಿನೊಳಗಿಟ್ಟರೆ ಅದು ಕರಗಿ ಹೋಗುತ್ತಿದ್ದರೂ ನಮಗೆ ಗೊತ್ತೇ ಆಗುವುದಿಲ್ಲ.

ಕಾಲದ ಪ್ರವಾಹ ನಿರಂತರ, ಕ್ಷಣಭಂಗುರವಾದ ನಮ್ಮ ಜೀವನ ನೌಕೆ ಕಾಲದ ಗಣನೆಯಲ್ಲಿ ಕ್ಷಣಮಾತ್ರ – ನೀರಮೇಲಣ ಗುಳ್ಳೆಯಂತೆ ಅಲ್ಪ ಕಾಲಮಾತ್ರ ತೇಲಿ ಮರೆಯಾಗುವಂಥದ್ದು, ಕಾಲದ ವೈಶಿಷ್ಟ್ಯಗಳು ಹಲವಾರು ಕಾಲಕ್ಕೆ ಮಹತ್ವವಿದೆ-ಮೌಲ್ಯವಿದೆ. ಕಳೆದುಹೋದ ಕಾಲ ಮತ್ತೆಂದೂ ನಮಗೆ ದೊರೆಯದು. ಆದರೆ ಅದು ತನ್ನ ಹೆಜ್ಜೆಯ ಗುರುತನ್ನು ಉಳಿಸಬಲ್ಲದು. ಕಾಲಭೂತವನ್ನು ಮರೆಸಿ ವರ್ತಮಾನವನ್ನು ಮರೆಸಿ ಭವಿಷ್ಯತ್ತಿನ ಚಿತ್ತಾರವನ್ನು ಚಿತ್ರಿಸಬಲ್ಲದು. ಸೃಷ್ಟಿಯ ಆದಿಯಿಂದ ನಡೆದ ಘಟನೆಗಳೆಲ್ಲ ಕಾಲಗರ್ಭದಲ್ಲಿ ಹುದುಗಿವೆ. ಕಾಲ ರಹಸ್ಯಪೂರ್ಣ. ಒಮ್ಮೊಮ್ಮೆ ಮೇಲಿನ ವಿಷಯಗಳಿಗೆ ವ್ಯತಿರಿಕ್ತವಾಗಿಯೂ ಕಾಲ ಸಾಗುತ್ತದೆ.

ಒಡೆದ ಮಡಕೆಯಿಂದ ನೀರು ಸೋರಿ ಹೋಗುವಂತೆ ಕಾಲ ಜಾರಿಹೋಗುತ್ತದೆ. ಚಿತ್ರಗಳಿಂದ – ದಾಖಲೆಗಳಿಂದ ಘಟನೆಗಳನ್ನು ನೆನಪಿಗೆ ತಂದುಕೊಳ್ಳಬಹುದೇ ಹೊರತು ಕಾಲವನ್ನು ಹಿಡಿದು ನಿಲ್ಲಿಸಲಾರೆವು. ಕಾಲ ಸರ್ವಕಾಲಿಕ ಸಾರ್ವಭೌಮ. ನಾವು ಬಯಸುವುದು ಒಂದಾದರೆ ಕಾಲ ತೋರಿಸುವುದೇ ಮತ್ತೊಂದು.

ಈ ಕ್ಷಣ ನಮ್ಮದು ಮುಂದಿನ ಕ್ಷಣ ನಮ್ಮವಶದಲ್ಲಿಲ್ಲ ಹಿಂದಿನ ಮಧುರ ಕ್ಷಣಗಳನ್ನು ಮೆಲಕು ಹಾಕಬಹುದು. ಬೇಸರದ ಕ್ಷಣಗಳನ್ನು ಮರೆಯಲು ಯತ್ನಿಸಬಹುದು. ಇವೆಲ್ಲವುಗಳ ಮಧ್ಯೆ ನಮ್ಮ ದೇಹದಲ್ಲಿ, ನಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಕ್ಷಣ ಕ್ಷಣವು ಬದಲಾವಣೆಗಳುಂಟಾಗುತ್ತಿವೆ ಎಂಬುದನ್ನು ಅರಿತರೆ ಮುಂದಿನ ಜೀವನದಲ್ಲಿ ತಲೆದೋರುವ ಖಿನ್ನತೆ ಕಡಿಮೆಯಾಗಬಹುದು.

ನಮ್ಮ ಶರೀರದಲ್ಲಿ ಅಸಂಖ್ಯಾತ ಜೀವಕೋಶಗಳಿವೆ. ಅವು ಸ್ಥಿರ ಸ್ಥಿತಿಯಲ್ಲಿರದೆ ಬದಲಾವಣೆ ಹೊಂದುತ್ತಿರುತ್ತವೆ. ಕೆಲವು ಕ್ಷಣಕ್ಷಣವು ಸಾಯುತ್ತಿರುತ್ತವೆ. ಮತ್ತೆ ಹಲವು ಹುಟ್ಟುತ್ತಿರುತ್ತವೆ, ನಿಮಿಷದಲ್ಲಿ ಮರಣ ನಿಮಿಷದಲ್ಲಿ ಜನನ, ಸೃಷ್ಟಿಯೂ ಇದಕ್ಕೆ ಹೊರತಲ್ಲ. ಉಸಿರಾಟ ನಿಂತಾಗ ಸಾವು ಸಂಭವಿಸಿತು ಎನ್ನುತ್ತೇವೆ. ಕ್ಷಣ-ಕ್ಷಣದಲ್ಲೂ ಸಾಯುತ್ತಿರುವ ಅಂಗಾಂಶಗಳ ಸಾವನ್ನು ಅರಿತಿದ್ದರೆ ಸಾವಿನ ಬಗ್ಗೆ ಭೀತಿ ಕಡಿಮೆಯಾಗಬಹುದೇನೋ? ಮನೋಬಲ, ಆತ್ಮಬಲ ಹೆಚ್ಚಬಹುದೇನೋ!

'ಕಾಲ ಕೆಟ್ಟು ಹೋಗಿದೆ' ಎನ್ನುತ್ತಾರೆ. ಸದಾ ಸುಖದ ಕ್ಷಣಗಳನಷ್ಟೇ ಎದುರು ನೋಡುವ ನಾವು ದುಃಖದ ಕ್ಷಣಗಳನ್ನು ಎದುರಿಸಲು ಬಯಸುವುದಿಲ್ಲ. ನಮ್ಮೆಲ್ಲ ಹಿಗ್ಗು-ಸಿಗ್ಗು, ಬೇನೆ-ಬೇಸರ, ಭಯ-ನಿರ್ಭಯ ಇವೆಲ್ಲಕ್ಕೂ ನಮ್ಮ ನಮ್ಮ ಮನೋಧರ್ಮವೇ ಕಾರಣ, ಕಾಲ ಭಾವತೀತ.

ಬೌದ್ಧಧರ್ಮ ಹೇಳುತ್ತದೆ – ಜೀವನ ಕ್ಷಣಿಕ, ನಶ್ವರ ಕ್ಷಣಭಂಗುರವೆಂದು, ಶಂಕರಾಚಾರ್ಯರ ಮಾಯಾವಾದವೂ ಇದನ್ನು ಸಮರ್ಥಿಸುತ್ತದೆ. ಜಗತ್ತೆಂಬುದೇ ಭ್ರಮೆ-ಮಿಥ್ಯ. ಜೀವ-ಜಗತ್ತು ಯಾವುದೂ ಸ್ಥಿರವಲ್ಲ.

ಆದರೆ ಶರಣರು ಜಗತ್ತು ಭ್ರಮಾತ್ಮಕವಾದದ್ದು ಎಂಬುದನ್ನು ಒಪ್ಪುವುದಿಲ್ಲ. ಈ ಭೂಮಿಯ ಮೇಲೆ ಸಾರ್ಥಕ ಬದುಕಿದೆ ಎನ್ನುತ್ತಾರೆ. ಈ ಮರ್ತ್ಯಕ್ಕೆ ಮಹತ್ವವಿತ್ತು ಮರ್ತ್ಯವೆಂಬುದು ಕರ್ತಾರನ ಕಮ್ಮಟ, ದೇವನ ಟಂಕಸಾಲೆ ಇಲ್ಲಿ ಸಂದಮಾನವ ದೈವತ್ವಕ್ಕೇರುವ ಮತ್ತು ಕಾಲದ ಕಟ್ಟಳೆಗೆ ದೂರನಾಗುವ ಎನ್ನುತ್ತಾರೆ.

ನಮ್ಮ ಸುತ್ತಲಿನ ಜಗತ್ತು-ಜೀವ ಜಗತ್ತು-ಸಸ್ಯವರ್ಗ, ಬೆಟ್ಟ, ಗುಡ್ಡ, ಮಣ್ಣು-ಕಲ್ಲು, ನೀರು-ಬಯಲು ಅಗೋಚರ ಶಕ್ತಿಗಳು ಮುಂತಾದವುಗಳನ್ನೆಲ್ಲಾ ಒಳಗೊಂಡ ವಿಸ್ಮಯದ ಪ್ರಕೃತಿ ನಮ್ಮನ್ನು ಆವರಿಸಿಕೊಳ್ಳುತ್ತದೆ ಸಂತೃಪ್ತಿ ನೀಡುತ್ತದೆ. ಮುದನೀಡುತ್ತದೆ. ಸತ್ಯ-ಮಿಥ್ಯಗಳ ತರ್ಕದಿಂದ ದೂರವಿಡುತ್ತದೆ. ಶಿವಸೃಷ್ಟಿಯನ್ನು ಶಿವಭಾವದಿಂದ ನೋಡಿದರೆ ಶಿವನ ವಿರಾಟ್ ಸ್ವರೂಪವನ್ನು ಪ್ರಕೃತಿಯಲ್ಲಿ ಸಾಕ್ಷಾತ್ಕಾರಿಸಿಕೊಳ್ಳಬಹುದೆಂದು ಅವರ ವಿಚಾರವಾಗಿದೆ. ಅಕ್ಕಮಹಾದೇವಿಯ ಈ ವಚನ ಸೂಕ್ತ ಉದಾಹರಣೆಯಾಗಿದೆ –

*''ವನವೆಲ್ಲಾ ನೀನೆ ವನದೊಳಗಣ ದೇವತರುವೆಲ್ಲಾ ನೀನೆ,*
*ತರುವಿನೊಳಗಾಡುವ ಖಗಮೃಗವೆಲ್ಲ ನೀನೆ.*
*ಚೆನ್ನಮಲ್ಲಿಕಾರ್ಜುನಾ ಸರ್ವಭರಿತನಾಗಿ ಎನಗೆ ಮುಖದೋರಾ''*

ಜಗತ್ತು ಜೀವಕೋಟಿ ಕಾಲಾಂತರದಲ್ಲಿ ನಾಶಹೊಂದಬಹುದು. ಆದರೆ ಮನುಷ್ಯನಿರುವವರೆಗೂ ಅವನು ನಂಬಿಕೊಂಡುಬಂದ ತತ್ವಸತ್ಯಗಳಿಗೆ ನಾಶವಿಲ್ಲ. ಉದಾಹರಣೆಗೆ 'ಆತ್ಮದ ಅಮರತ್ವ'. ಬೌದ್ಧ ಧರ್ಮವನ್ನು ಹೊರತುಪಡಿಸಿ ಭಾರತೀಯ ಧರ್ಮಗಳೆಲ್ಲ ಆತ್ಮದ ನಿರಂತತೆಯನ್ನು ಒಪ್ಪುತ್ತವೆ. ಆತ್ಮಕ್ಕೆ ಹುಟ್ಟು-ಸಾವಿಲ್ಲ. ಅದು ಅವಿನಾಶ. ಹಾಗಿದ್ದಲ್ಲಿ ಬದುಕನ್ನು ಕ್ಷಣಿಕವೆಂದಾಗಲಿ, ಮಿಥ್ಯವೆಂದಾಗಲಿ ಹೇಳಲು ಬಾರದು. ಪ್ರಕೃತಿ ಎಲ್ಲಿಂದ ಹುಟ್ಟಿ ಬರುತ್ತದೊ ಅದರಲ್ಲೇ ಅಡಗುತ್ತದೆ, ಎಲ್ಲಿ ಅಡಗುತ್ತದೊ ಅಲ್ಲಿಂದಲೇ ಪ್ರಕಟಗೊಳ್ಳುತ್ತದೆ.

ಮಹಾತ್ಮರಾದ ಕೆಲವರ ಜೀವನವನ್ನು ಅವಲೋಕಿಸಿದರೆ ಅವರ ಜೀವಿತದಲ್ಲಿ ನಡೆದ ಘಟನೆಯ ಕ್ಷಣಗಳು ಅವರ ಬದುಕಿನ ದಿಕ್ಕನ್ನೇ ಬದಲಾಯಿಸಿ ವೈರಾಗ್ಯದ ಕಡೆಗೋ, ಆಧ್ಯಾತ್ಮಪಥದೆಡೆಗೋ ಅಥವ ಸಮಾಜಸೇವಾ ಕಾರ್ಯಗಳೆಡೆಗೋ ಮುನ್ನಡೆಸಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಬುದ್ಧ, ಬಸವ, ಅಕ್ಕಮಹಾದೇವಿ, ಪುರಂದರದಾಸ, ತುಳಸೀದಾಸ ಮುಂತಾದವರು. ಆಸೆ-ಆಮಿಷ, ಮೌಢ್ಯಗಳಿಂದ ತುಂಬಿರುವ ವ್ಯಕ್ತಿ ಕ್ಷಣ ಕಾಲದಲ್ಲಿ ತನ್ನ ಬದುಕನ್ನೇ ಹಾಳು ಮಾಡಿಕೊಂಡಿರುವ ಉದಾಹರಣೆಗಳೂ ಹೇರಳವಾಗಿವೆ.

ಮಾನವರ ಬದುಕು ಅವರ ವಿಚಾರಧಾರೆ, ಸಾಧನೆ, ಸಿದ್ಧಿಗಳಿಂದ ಪ್ರಕಾಶಗೊಳ್ಳುತ್ತವೆಯೇ ಹೊರತು ಅವರು ಸಿರಿವಂತರು ಉತ್ತಮ ಕುಲಜರು ಎಂಬ ಕಾರಣಗಳಿಂದಲ್ಲ. ಕನಕದಾಸ, ಕಬೀರದಾಸ, ಮಹಾತ್ಮಫುಲೆ ಮುಂತಾದವರು ನಮಗೆ ಮಾದರಿಯಾಗಿದ್ದಾರೆ.

ಹರಿಯುವ ನದಿ ನೀರ ಹನಿಗಳಿಂದ ಕೂಡಿದ್ದು ಪ್ರವಹಿಸುತ್ತಿರುತ್ತದೆ, ಕಾಲವೂ ಕೂಡ ಕ್ಷಣಗಳಿಂದ ಕೂಡಿದ್ದು ನಿರಂತತೆಯನ್ನು ಪಡೆದಿದೆ. ನೀರಿನ ಒಂದೊಂದು ಹನಿಯೂ ಪೂರ್ಣ ಹಾಗೂ ಸಾರ್ಥಕ್ಯದಿಂದ ಕೂಡಿರುವಂತೆ ಕಾಲದ ಕ್ಷಣವೂ ಕೂಡ ಪೂರ್ಣ ಮತ್ತು ಸಾರ್ಥಕ್ಯದಿಂದ ಕೂಡಿದೆ. ಆದರೆ ಅದರ ಸದುಪಯೋಗ ಅಥವಾ ವ್ಯರ್ಥಗೊಳಿಸಿ ಕೊಳ್ಳುವುದು ಬಳಸಿಕೊಳ್ಳುವರ ಮನದಲ್ಲಿದೆ. ದಾರ್ಶನಿಕ ಕವಿ ಡಾ. ಸಿದ್ಧಯ್ಯ ಪುರಾಣಿಕರ ಈ ವಚನ ಅರ್ಥಪೂರ್ಣವೆನಿಸುತ್ತದೆ –

*''ಒಂದು ಕ್ಷಣ ತಪ್ಪು ಮಾಡುತ್ತದೆ*
*ಶತಮಾನಗಳು ಶಿಕ್ಷೆ ಅನುಭವಿಸುತ್ತದೆ*
*ಒಂದು ಕ್ಷಣ ಒಪ್ಪು ನುಡಿಯುತ್ತದೆ*
*ಶತಮಾನಗಳು ಅರ್ಥವಿಸುತ್ತಾ ಹೋಗುತ್ತದೆ*
*ಹಿಂದಣ ಯುಗದ ಮುಂದಣಯುಗವ*
*ಸಂಧಿಸುವುದು ಒಂದು ಕ್ಷಣ*
*ಉಪೇಕ್ಷಣೀಯವಲ್ಲ ಕ್ಷಣ''*

ಈ ವಚನದ ಅರ್ಥ ನಮಗೆ ಸರಳವೆನಿಸಿದರೂ ಪುರಾಣಿಕರು ಇತಿಹಾಸದ ತಪ್ಪು-ಒಪ್ಪುಗಳ ಸಂಪುಟವನ್ನೇ ತೆರೆದಿಟ್ಟಿದ್ದಾರೆ. ಕ್ಷಣಕಾಲದಲ್ಲಿ ಘಟಿಸಿಹೋಗುವ ಘಟನೆಗಳು – ಅವು ಮಾನವನ ತಪ್ಪಿನಿಂದಾಗಲಿ, ನಿಸರ್ಗದತ್ತವಾದುದ್ದಾಗಿರಲಿ ಶತಮಾನಗಳಷ್ಟು ಕಾಲ ನರಕಯಾತನೆಯನ್ನು ಬಿತ್ತುತ್ತವೆ, ಕಣ್ಣೀರ ಮಳೆಯನ್ನು ಕರೆಸುತ್ತವೆ. ಹಿರೋಷಿಮ-ನಾಗಸಾಕಿ ಪಟ್ಟಣಗಳ ನಾಶ, ಅಮೆರಿಕೆಯ ಪ್ರಪಂಚ ವ್ಯಾಪಾರ ಕೇಂದ್ರಕಟ್ಟಡಗಳ ನಾಶ, ಇರಾನ್, ಇರಾಕ್ ಯುದ್ಧ, ಅಪಘಾನಿಸ್ತಾನದ ಯುದ್ಧ, ಕಾಶ್ಮೀರ ದಲ್ಲಿನ ಭಯೋತ್ಪಾದಕತೆ ಮುಂತಾದವುಗಳು.

ಋಷಿಮುನಿಗಳು, ಸಾಧುಸಂತರು ಬುದ್ಧ-ಬಸವರಂಥ ಮಹಾತ್ಮರು ಮಾನವ ಜಾತಿಯ ಔನತ್ಯಕ್ಕಾಗಿ 'ಒಪ್ಪನ್ನು' ನುಡಿದ ಕ್ಷಣಗಳು ಕಾಲಗರ್ಭ ದಲ್ಲಿ ಸೇರಿ ಹೋಗದೆ ಜನಮನದಲ್ಲಿ ಬೇರೂರಿ ಬಯಸಿದವರ ಕಾಮಧೇನು-ಕಲ್ಪವೃಕ್ಷಗಳಾಗಿವೆ. ಕ್ಷಣ ಬಹಳ ಅಲ್ಪ ಸಮಯವೇ ಆದರೂ ಈ ಕಾಲವೇ ಮಾನವನ ಬದುಕಿನ ಜೀವಾಳದ ಎಲ್ಲ ಮಹತ್ವದ ಸಂಗತಿಗಳನ್ನು ಒಳಗೊಂಡಿರಬಹುದು. ಅಥವಾ ಇದಕ್ಕೆ ವಿರುದ್ಧವಾಗಿಯೂ ಇರಬಹುದು.

ಇಂಗ್ಲೆಂಡಿನ ಪ್ರಸಿದ್ಧಕವಿ ಬೆನ್‌ಜಾನ್ಸನ್ ಹೇಳುತ್ತಾನೆ – ''ಹೆಮ್ಮರದಂತೆ ಬೃಹತ್ ಗಾತ್ರಕ್ಕೆ ಬೆಳೆಯುವುದರಿಂದ ಮಾನವನು ಉತ್ತಮನಾಗುವುದಿಲ್ಲ. ಒಂದು ಮರ ನೂರು ವರ್ಷ ಬದುಕಿದರೂ ಆಗುವುದೇನು? ಕೊನೆಗೂ ಕೊರಡಾಗಿ ಉರುಳಿಬಿದ್ದು ಸೌದೆಯಾಗಿ, ಇದ್ದಿಲಾಗಿ ಬೂದಿಯಾಗುವುದು. ಆದರೆ ಮೇ ತಿಂಗಳಲ್ಲಿ ಒಂದು ಹಗಲು ಮಾತ್ರ ಅರಳಿನಿಂತ ಲಿಲ್ಲಿಹೂವು ಲೋಕಕ್ಕೆ ಚೆಲುವಿತುಂಬಿ, ನಲಿವು ತರುವುದು. ಬಹಳ ಕಾಲ ಹೊಗೆಯಾಡುತ್ತಲೇ ಇರುವುದಕ್ಕಿಂತ ಕ್ಷಣಮಾತ್ರ ಭುಗಿಲೆದ್ದು ಜ್ವಾಲೆಯಾಗಿ ಉರಿದುಬಿಡುವುದೇ ಲೇಸು'' ಎಂದು. ಇಂಥ ಅರ್ಥಪೂರ್ಣ ನುಡಿಗಳು ಸಾರ್ವಕಾಲಿಕವಾದವುಗಳು.

ನಮ್ಮ ಶರಣರೂ ಇದೇ ಅಭಿಪ್ರಾಯ ಹೊಂದಿದ್ದವರು. ಅವರ ಪ್ರಕಾರ ಬದುಕಿನ ಸಾರ್ಥಕತೆ ದೀರ್ಘಕಾಲ ಬಾಳುವುದರಲ್ಲಿಲ್ಲ. ಅಲ್ಪಕಾಲವಾದರೂ ಸರಿ; ಉತ್ತಮ ಬದುಕನ್ನು ಬದುಕುವುದರಲ್ಲಿದೆ. ಬಸವಣ್ಣನವರ ಈ ವಚನ ಬದುಕಿನ ಸಾರ್ಥಕ ಕ್ಷಣಗಳ ಕೈಗನ್ನಡಿಯಂತಿದೆ --

*''ಲೇಸೆನಿಕೊಂಡು ಐದು ದಿನ ಬದುಕಿದಡೇನು?*
*ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದಡೇನು?*
*ಲೇಸೆನಿಸಿಕೊಂಡು ಮೂರು ದಿನ ಬದುಕಿದಡೇನು?*
*ಲೇಸೆನಿಸಕೊಂಡು ಎರಡು ದಿನ ಬದುಕಿದಡೇನು?*
*ಕೂಡಲಸಂಗನ ಶರಣರ ವಚನದಲ್ಲಿ*
*ಲೇಸೆನಿಸಿಕೊಂಡು ಒಂದು ದಿನ ಬದುಕಿದಡೇನು?*

ಲೇಸೆನಿಸಿಕೊಳ್ಳದೆ ಬದುಕುವ ದೀರ್ಘಕಾಲದ ಬದುಕುಬೇಡ. ಐದುದಿನ, ನಾಲ್ಕುದಿನ, ಮೂರುದಿನ, ಎರಡು ದಿನ ಕೊನೆಗೆ ಒಂದು ದಿನ ಬದುಕಿದರೂ ಸಾಕು. ಅದೇ ಸಾರ್ಥಕ 'ಕ್ಷಣ'. ಕ್ಷಣ-ಕ್ಷಣವೂ ಶಿವ-ಜಗತ್ತು ಮೆಚ್ಚುವಂತೆ ಬದುಕಬೇಕು. ಅದೇ ಮಂಗಳ ಕ್ಷಣ, ಶಿವಕ್ಷಣ.

★

ನಂಬಿಕೆ ಒಂದು ಕನ್ನಡಿಯಿದ್ದಂತೆ, ಒಮ್ಮೆ ಅದರ ಮೇಲೆ ಉಸಿರು ಬಿಟ್ಟಾಗ ಮಸುಕುಗೊಳ್ಳುತ್ತದೆ. ಒರೆಸಿದಾಗ ಮತ್ತೆ ಸ್ವಚ್ಛವಾಗುತ್ತದೆ. ಆದರೆ ಒಮ್ಮೆ ಅದು ಒಡೆದರೆ ಮತ್ತೆ ದುರಸ್ತಿ ಮಾಡಲಾಗದು.

– ವಾಲ್ಟರ್ ಸ್ಕಾಟ್





## ಬೆನಕನಹಳ್ಳಿಯಲ್ಲಿ ಪಟ್ಟದ ಶ್ರೀ ನಂಜುಂಡಸ್ವಾಮಿಗಳವರ ಪುಣ್ಯಾರಾಧನೆ



ಟಿ. ನರಸೀಪುರ ತಾಲ್ಲೂಕು ಬೆನಕನಹಳ್ಳಿಯಲ್ಲಿ ಪಟ್ಟದ ಶ್ರೀ ನಂಜುಂಡಸ್ವಾಮಿಗಳವರ ೧೨ನೆಯ ವರ್ಷದ ಪುಣ್ಯಾರಾಧನೆ ಸಮಾರಂಭವನ್ನು ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ಸುತ್ತೂರು ಜಗದ್ಗುರುಗಳು, ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಕನಕಪುರ ದೇಗುಲ ಮಠದ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ರಾಜ್ಯಸಭಾ ಸದಸ್ಯರಾದ ಶ್ರೀ ಎಂ. ರಾಜಶೇಖರಮೂರ್ತಿ ಅವರು ಹಾಗೂ ಶ್ರೀ ಬೆ.ಗು. ಶಿವಸ್ವಾಮಿ ಅವರು ಉಪಸ್ಥಿತರಿದ್ದರು.



## ಶರಣಮೇಳ

ಇತ್ತೀಚೆಗೆ ಮಂಡ್ಯ ಜಿಲ್ಲೆ ಮೇದಿನಿ ಮಠದಲ್ಲಿ ನಡೆದ ಶರಣ ಮೇಳವನ್ನು ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಕನಕಪುರ ದೇಗುಲ ಮಠದ ಶ್ರೀ ಶ್ರೀಗಳು ಮತ್ತು ಶಂಭುಲಿಂಗ ಕ್ಷೇತ್ರದ ಶ್ರೀಗಳವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

→ ತುಮಕೂರಿನಲ್ಲಿ ಟಾಟಾ ಇಂಡಿಕಾಂ ಸ್ಥಳೀಯ ವಿತರಕರ ಕಛೇರಿಯನ್ನು ಜೂನ್ ೯ರಂದು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಟಾಟಾ ಟೆಲಿ ಸರ್ವೀಸ್ ಮುಖ್ಯನಿರ್ವಹಣಾಧಿಕಾರಿ ಶ್ರೀ ಪ್ರಭಾತ್‌ಪಾಣಿ, ಪ್ರಧಾನ ವ್ಯವಸ್ಥಾಪಕ ಶ್ರೀ ರಾಜಾ ಆರ್. ಫಿಲ್ಬರ್, ಸ್ಥಳೀಯ ವಿತರಕ ಶ್ರೀ ಸುರೇಂದ್ರ, ಪ್ರವೀಣ್ ಮೊದಲಾದವರು ಉಪಸ್ಥಿತರಿದ್ದರು.

ಮೇ ೨೪ರಂದು ತುಮಕೂರು ತಾಲ್ಲೂಕು ಬೈರಸಂದ್ರ ಗ್ರಾಮದಲ್ಲಿ ದೇವಾಲಯ ಮತ್ತು ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮವನ್ನು ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ, ಸಾಹಿತಿ ಕವಿತಾಕೃಷ್ಣ, ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕ ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ಉಪಸ್ಥಿತರಿದ್ದರು. ←

→ ಮೇ ೧೬ರಂದು ಕುಂತೂರು ಮಠದಲ್ಲಿ ಬಸವ ಜಯಂತಿ ಹಾಗೂ ಪೂಜ್ಯ ಶ್ರೀ ಶ್ರೀ ಶಿವಸ್ವಾಮಿಗಳ ೨೫ನೇ ವರ್ಷದ ಪೀಠಾಧಿಕಾರದ ರಜತ ಮಹೋತ್ಸವ ಸಮಾರಂಭವನ್ನು ಸಿದ್ಧಗಂಗಾ ಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ದಲಿಂಗ ಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.





# ಇಸುವನಹಳ್ಳಿ ಭಕ್ತರಿಂದ ಶ್ರೀಮಠದಲ್ಲಿ ಸಾಮೂಹಿಕ ಶಿವಪೂಜೆ

ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಇಸುವನಹಳ್ಳಿ ಭಕ್ತರು

'ಇಸುವನಹಳ್ಳಿ' ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕು ತ್ಯಾಮಗೊಂಡ್ಲು ಹೋಬಳಿ ವ್ಯಾಪ್ತಿಯಲ್ಲಿ ಬರುವ ಒಂದು ಸುಸಂಸ್ಕೃತ ಆದರ್ಶಗ್ರಾಮ. ಈ ಗ್ರಾಮದ ಜನ ಮೊದಲಿನಿಂದಲೂ ಶ್ರೀಮಠಕ್ಕೆ ನಡೆದುಕೊಳ್ಳುವ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪರಮಭಕ್ತರು. ಮೊದಲು ಈ ಗ್ರಾಮದ ಜನ ತಮಗೆ ಅನುಕೂಲವಾದ ದಿನದಂದು ಪೂಜ್ಯ ಶ್ರೀ ಶ್ರೀಗಳವರನ್ನು ಬರಮಾಡಿಕೊಂಡು ತಮ್ಮ ಮನೆಯಲ್ಲಿ ಶಿವಪೂಜೆಯನ್ನು ಮಾಡಿಸುತ್ತಿದ್ದರು. ಪ್ರತಿಯೊಂದು ಕುಟುಂಬದವರಿಗೂ ಪೂಜ್ಯ ಶ್ರೀ ಶ್ರೀಗಳವರಿಂದ ಶಿವಪೂಜೆ ಮಾಡಿಸಬೇಕೆಂಬ ಹಂಬಲ. ಎಷ್ಟೋ ಸಲ ಪರಮಪೂಜ್ಯ ಶ್ರೀ ಶ್ರೀಗಳವರಿಗಿದ್ದ ಕಾರ್ಯಭಾರದ ಒತ್ತಡ, ಸಮಯಾಭಾವ ಇವುಗಳಿಂದ ತಮ್ಮ ಮನದ ಬಯಕೆ ಈಡೇರಿಸಿಕೊಳ್ಳುವುದು ಮರೀಚಿಕೆಯಾಗಿಯೇ ಉಳಿಯುತ್ತಿತ್ತು. ಈ ಗ್ರಾಮದ ಕೆಲವು ಭಕ್ತರು ಒಂದೆಡೆ ಸೇರಿ ಜನರ ಬಯಕೆ ಈಡೇರುವಂತಹ ಒಂದು ಶಾಶ್ವತ ಪರಿಹಾರ ಕಂಡುಕೊಳ್ಳಲು ಸಮಾಲೋಚನೆ ನಡೆಸಿ ಒಂದು ನಿರ್ಧಾರಕ್ಕೆ ಬಂದರು. ಅವರು ಕೈಗೊಂಡ ನಿರ್ಧಾರಕ್ಕೆ ಸಾಮೂಹಿಕ ಒಪ್ಪಿಗೆ ದೊರೆಯಿತು. ಅದರ ಪರಿಣಾಮವೆ ಇಸುವನಹಳ್ಳಿ ಗ್ರಾಮದ ಜನರೆಲ್ಲರೂ ವರ್ಷಕ್ಕೆ ಒಂದು ದಿನ ಶ್ರೀಮಠಕ್ಕೆ ಆಗಮಿಸಿ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಶಿವಪೂಜಾ ಮಂಗಲ ಕಾರ್ಯದಲ್ಲಿ ಭಾಗವಹಿಸಿ ತಮ್ಮ ಮನದ ಇಚ್ಛೆಯನ್ನು ಪೂರ್ಣಗೊಳಿಸಿ ಆತ್ಮ ಸಂತೋಷವನ್ನು ಪಡೆದು ಧನ್ಯರಾಗುತ್ತಿದ್ದಾರೆ.



ಶ್ರೀಮಠದ ಉತ್ತರಾಧಿಕಾರಿಗಳಾದ ಪರಮಪೂಜ್ಯ
ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳೊಂದಿಗೆ ಇಸುವನಹಳ್ಳಿ ಭಕ್ತಸಮೂಹ

ಕಳೆದ ಐದು ವರ್ಷಗಳಿಂದ ಈ ಸಂಪ್ರದಾಯವನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. ಹಿಂದಿನ ದಿನ ಸಂಜೆ ಈ ಗ್ರಾಮದ ಭಕ್ತರು ಶ್ರೀಮಠಕ್ಕೆ ಬರುತ್ತಾರೆ. ಬರುವಾಗ ಜೊತೆಯಲ್ಲಿ ಆ ವರ್ಷ ತಾವು ಬೆಳೆದ ಪ್ರತಿಯೊಂದು ಬೆಳೆಯನ್ನು ತಮ್ಮ ಶಕ್ತ್ಯಾನುಸಾರ ಒಂದೆಡೆ ಸಂಗ್ರಹಿಸಿ ತೆಗೆದುಕೊಂಡು ಬರುತ್ತಾರೆ. ಜೊತೆಗೆ ಬಂದವರೆಲ್ಲರಿಗೂ ಸ್ವತಃ ತಾವೇ ದಾಸೋಹ ಸಿದ್ಧತೆ ಮಾಡಿಕೊಳ್ಳುತ್ತಾರೆ. ಬೆಳಗಿನ ಜಾವ ಪ್ರಶಾಂತ ಮಂಗಲ ವಾತಾವರಣದಲ್ಲಿ ಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ಶಿವಪೂಜೆಯನ್ನು ಮಾಡುವುದು ಒಂದು ಅವರ್ಣನೀಯ ಅನುಭವ ಎನ್ನುತ್ತಾರೆ ಶಿವಪೂಜಾ ಮಂಗಲ ಕಾರ್ಯದಲ್ಲಿ ಭಾಗಿಗಳಾದ ಪುಣ್ಯಜೀವಿಗಳು.

ಇದೊಂದು ಬೇರೆಯವರಿಗೆ ಒಂದು ಸಾಮಾನ್ಯ ವಿಷಯವೆನಿಸಿದರೂ ಅದರ ಹಿಂದಿನ ಸದುದ್ದೇಶವನ್ನು ಅರ್ಥ ಮಾಡಿಕೊಳ್ಳಬೇಕು. ಪರಮಪೂಜ್ಯ ಶ್ರೀ ಶ್ರೀಗಳವರು ಈ ಇಳಿವಯಸ್ಸಿನಲ್ಲಿಯೂ ಆಯಾಸವನ್ನು ಲೆಕ್ಕಿಸದೆ ಭಕ್ತರ ಅಪೇಕ್ಷೆಯನ್ನು ಪೂರೈಸಲು ಪ್ರಯಾಣಮಾಡುತ್ತಿರುವುದನ್ನು ತಪ್ಪಿಸಲು ಇದೊಂದು ಉತ್ತಮ ಮಾರ್ಗ. ಇದುವರೆಗೂ ಪೂಜ್ಯ ಶ್ರೀಗಳವರು ಭಕ್ತರಿದ್ದಲ್ಲಿಗೆ ಹೋಗಿ ಅವರ ಮನದಿಚ್ಛೆಯನ್ನು ಪೂರೈಸುತ್ತಿದ್ದರು. ಈಗ ಪೂಜ್ಯ ಶ್ರೀ ಶ್ರೀಗಳವರಿಗೆ ೯೭ರ ವಯಸ್ಸು, ಮನಸ್ಸು ಆರೋಗ್ಯವಾಗಿದ್ದರೂ, ದೇಹ ಪ್ರಕೃತಿಗನುಗುಣವಾಗಿ ಬಾಗಿದೆ. ಅವರ ಆರೋಗ್ಯ ರಕ್ಷಣೆ ನಮ್ಮೆಲ್ಲರ ಹೊಣೆಯಾಗಿದೆ. ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಭಾಗ್ಯ ನಮಗೆ, ನಾಡಿಗೆ, ರಾಷ್ಟ್ರಕ್ಕೆ ಇನ್ನಷ್ಟು ಕಾಲ ದೊರೆಯುವಂತಾಗಬೇಕು. ಅವರ ಮಾರ್ಗದರ್ಶನದ ಮುಂಬೆಳಕಿನಲ್ಲಿ ನಾವೆಲ್ಲರೂ ಪ್ರಗತಿಯ ದಾರಿಯಲ್ಲಿ ಮುನ್ನಡೆಯಬೇಕು. ಈ ಹಿನ್ನಲೆಯಲ್ಲಿ ಇಸುವನಹಳ್ಳಿ ಗ್ರಾಮಸ್ಥರು ತೆಗೆದುಕೊಂಡ ನಿರ್ಧಾರ ಇತರರಿಗೆ ಉತ್ತಮ ಮಾರ್ಗದರ್ಶನ. ಇದುವರೆಗೂ ಪರಮ ಪೂಜ್ಯ ಶ್ರೀಗಳವರು ಭಕ್ತರಿದ್ದಲ್ಲಿಗೆ ಬಂದರು. ಇನ್ನು ಮುಂದೆ ಭಕ್ತರೇ ಗುರುವಿನ ಬಳಿಗೆ ಬರುವಂತಾದರೆ ಅದೆಷ್ಟು ಚೆನ್ನ!

ವರದಿ : ಎಂ. ರೇಣುಕಾರಾಧ್ಯ

## ಪಿ.ಯು.ಸಿ.ಯಲ್ಲಿ ಉತ್ತಮ ಫಲಿತಾಂಶ

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲದಲ್ಲಿರುವ ಶ್ರೀ ಬಸವೇಶ್ವರ ಪದವಿಪೂರ್ವ ಕಾಲೇಜಿನ ೨೦೦೩-೦೪ನೇ ಸಾಲಿನ ದ್ವಿತೀಯ ಪಿ.ಯು.ಸಿ. ವಾರ್ಷಿಕ ಪರೀಕ್ಷೆಯಲ್ಲಿ ಶೇ. ೮೬.೨೨ರಷ್ಟು ಫಲಿತಾಂಶ ಬಂದಿದೆ. ಪರೀಕ್ಷೆ ತೆಗೆದುಕೊಂಡ ವಿದ್ಯಾರ್ಥಿಗಳ ಸಂಖ್ಯೆ ೯೩. ಇದರಲ್ಲಿ ೫೯ ಜನ ವಿದ್ಯಾರ್ಥಿಗಳು ಪ್ರಥಮ ದರ್ಜೆಯಲ್ಲಿ, ೧೪ ಜನ ವಿದ್ಯಾರ್ಥಿಗಳು ದ್ವಿತೀಯ ದರ್ಜೆಯಲ್ಲಿ ಹಾಗೂ ೭ ಜನ ವಿದ್ಯಾರ್ಥಿಗಳು ತೃತೀಯ ದರ್ಜೆಯಲ್ಲಿ ಉತ್ತೀರ್ಣರಾಗಿದ್ದಾರೆಂದು ಕಾಲೇಜಿನ ಪ್ರಾಂಶುಪಾಲರು ಪ್ರಕಟಣೆಯಲ್ಲಿ ತಿಳಿಸಿದ್ದಾರೆ.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೯೧. | **ಶ್ರೀ ಡಿ.ಆರ್. ಶಾಮಸುಂದರ್ ಮತ್ತು ಕುಟುಂಬ**<br>ನಿವೃತ್ತ ವಾಣಿಜ್ಯ ತೆರಿಗೆ ಅಧಿಕಾರಿಗಳು,<br>ಲಿಂಗೇಶ್ವರ ಸದನ, ಸೋಮೇಶ್ವರಪುರಂ,<br>ತುಮಕೂರು-೨. | ೫,೦೦೧.೦೦ |
| ೧೨೯೨. | **ಶ್ರೀ ನರಸಿಂಹರೆಡ್ಡಿ**<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೨,೦೦೧.೦೦ |
| ೧೨೯೩. | **ಶ್ರೀಮತಿ ಅನುಸೂಯಾ ಪ್ರಸಾದ್**<br>ಕೋಂ. ಹೆಚ್.ಆರ್. ಪ್ರಸಾದ್,<br>ಕಾಫಿ ಬೆಳೆಗಾರರು, ''ಅನುಪಮ ಎಸ್ಟೇಟ್'',<br>ಅಲಸೂಲಿಗೆ ಪೋಸ್ಟ್,<br>ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೫.೦೦<br>(೩ನೇ ಕಂತು) |
| ೧೨೯೪. | **ಶ್ರೀ ಟಿ. ನಾಗರಾಜು**<br>ಪ್ರಾಂಶುಪಾಲರು | ೨,೦೦೦.೦೦ |
| ೧೨೯೫. | **ಶ್ರೀ ಎಸ್. ಮಹೇಶ್**<br>ಉಪನ್ಯಾಸಕರು | ೨,೦೦೦.೦೦ |
| ೧೨೯೬. | **ಶ್ರೀ ಜಿ.ಜಿ. ಧರ್ಮಪ್ಪ**<br>ಉಪನ್ಯಾಸಕರು | ೨,೦೦೦.೦೦ |
| ೧೨೯೭. | **ಶ್ರೀ ಎಂ.ಪಿ. ಚನ್ನಬಸಪ್ಪ**<br>ಉಪನ್ಯಾಸಕರು | ೨,೦೦೦.೦೦ |
| ೧೨೯೮. | **ಶ್ರೀ ಜಿ.ಬಿ. ಮಲ್ಲಪ್ಪ**<br>ಉಪನ್ಯಾಸಕರು | ೨,೦೦೦.೦೦ |
| | ಕ್ರ.ಸಂ. ೧೨೯೪ ರಿಂದ ೧೨೯೮ರ ವರೆಗಿನ ವಿಳಾಸ<br>**ಶ್ರೀ ವಿನಾಯಕ ಪದವಿಪೂರ್ವ ಕಾಲೇಜು,**<br>ನಿಟ್ಟೂರು, ಗುಬ್ಬಿ ತಾಲ್ಲೂಕು. | |
| ೧೨೯೯. | **ಶ್ರೀ ಹೆಚ್. ರೇಣುಕಪ್ಪ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಹೆಚ್.ಬಿ. ರಸ್ತೆ, ತುಮಕೂರು. | ೨,೦೦೧.೦೦ |
| ೧೩೦೦. | **ಶ್ರೀ ಬಿ. ಗಂಗಣ್ಣ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಹೆಚ್.ಬಿ. ರಸ್ತೆ, ತುಮಕೂರು. | ೨,೦೦೧.೦೦ |
| ೧೩೦೧. | **ಶ್ರೀ ಹನುಮಂತಯ್ಯ**<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಜಿ.ಎಂ. ಹಳ್ಳಿ, ಮಾಗಡಿ ತಾಲ್ಲೂಕು. | ೨,೦೦೧.೦೦ |
| ೧೩೦೨. | **ಶ್ರೀ ಎಂ.ಎಸ್. ಮಲ್ಲಿಕಾರ್ಜುನಯ್ಯ**<br>ಸಹ ಶಿಕ್ಷಕರು,<br>ಶ್ರೀ ಶಾಲಿವಾಹ ಪ್ರೌಢಶಾಲೆ,<br>ತಂಡಿಗ, ತುರುವೇಕೆರೆ ತಾಲ್ಲೂಕು. | ೨,೦೦೧.೦೦ |
| ೧೩೦೩. | **ಶ್ರೀಮತಿ ಪರಿದಾಭಾನು**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕೆ.ಬಿ. ಮಠ, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೧೩೦೪. | **ಶ್ರೀ ಆರ್.ಎಂ. ಮೃತ್ಯುಂಜಯಪ್ಪ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕೆ.ಬಿ. ಮಠ, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೧೩೦೫. | **ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ**<br>ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ,<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦<br>(೨೬ನೇ ಕಂತು) |
| ೧೩೦೬. | **ಶ್ರೀ ಪ್ರಕಾಶ್**<br>ಪ್ರಾಂಶುಪಾಲರು | ೧,೦೦೦.೦೦ |
| ೧೩೦೭. | **ಶ್ರೀ ಮಂಜೇಗೌಡ**<br>ಉಪನ್ಯಾಸಕರು | ೧,೦೦೦.೦೦ |
| ೧೩೦೮. | **ಶ್ರೀ ಬಿ. ಶಿವಮೂರ್ತಿ**<br>ಉಪನ್ಯಾಸಕರು | ೨,೦೦೧.೦೦ |
| ೧೩೦೯. | **ಶ್ರೀ ಜಿ. ಬೈರಪ್ಪ**<br>ಉಪನ್ಯಾಸಕರು | ೨,೦೦೧.೦೦ |
| ೧೩೧೦. | **ಶ್ರೀ ಡಿ.ಎಸ್. ಮಾಯಣ್ಣಗೌಡ**<br>ಉಪನ್ಯಾಸಕರು | ೨,೦೦೧.೦೦ |
| ೧೩೧೧. | **ಶ್ರೀ ಬಿ.ಎಸ್. ದತ್ತಪ್ರಕಾಶ್**<br>ಉಪನ್ಯಾಸಕರು | ೨,೦೦೧.೦೦ |
| ೧೩೧೨. | **ಶ್ರೀ ಚಂದ್ರಶೇಖರಯ್ಯ**<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೧೩೧೩. | **ಶ್ರೀಮತಿ ವಿಮಲಾ**<br>ಗ್ರಂಥಪಾಲಕರು | ೧,೦೦೧.೦೦ |
| ೧೩೧೪. | **ಶ್ರೀ ನರಸಿಂಹಮೂರ್ತಿ**<br>ಪ್ರಥಮದರ್ಜೆ ಸಹಾಯಕರು | ೧,೦೦೧.೦೦ |
| ೧೩೧೫. | **ಶ್ರೀ ಕೆ.ಜಿ. ಪ್ರೇಮಕುಮಾರ್**<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| | ಕ್ರ.ಸಂ. ೧೩೦೬ ರಿಂದ ೧೩೧೫ರ ವರೆಗಿನ ವಿಳಾಸ<br>**ಶ್ರೀ ವಿವೇಕಾನಂದ ಪದವಿಪೂರ್ವ ಕಾಲೇಜು,**<br>ತುರುವೇಕೆರೆ, ತುಮಕೂರು ಜಿಲ್ಲೆ. | |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೩೧೬. | ಶ್ರೀಮತಿ ಎಂ.ಎಸ್. ಸರೋಜ<br>ಟೈಪಿಸ್ಟ್ | ೧,೦೦೧.೦೦ |
| ೧೩೧೭. | ಶ್ರೀಮತಿ ಕೆ. ಮಮತಾ<br>ದ್ವಿತಿಯ ದರ್ಜೆ ಸಹಾಯಕರು | ೧,೦೦೧.೦೦ |
| ೧೩೧೮. | ಶ್ರೀ ಕೆ.ಎಚ್. ಶಾಂತಕುಮಾರ್<br>ಅಟೆಂಡರ್ | ೧,೦೦೧.೦೦ |
| ೧೩೧೯. | ಶ್ರೀ ಟಿ. ರಾಜಗೋಪಾಲ್<br>ಸೇವಕರು | ೧,೦೦೧.೦೦ |
| ೧೩೨೦. | ಶ್ರೀ ಎಸ್.ಎನ್. ನಜೀರಸಾಬ<br>ಸೇವಕರು | ೧,೦೦೧.೦೦ |
| ೧೩೨೧. | ಶ್ರೀ ಎನ್. ಮಲ್ಲೇಶಪ್ಪ<br>ಕಾವಲುಗಾರ | ೧,೦೦೧.೦೦ |
| ೧೩೨೨. | ಶ್ರೀ ಬಿ.ಟಿ. ತಿಮ್ಮೇಗೌಡ<br>ಉಪನ್ಯಾಸಕರು | ೧,೦೦೧.೦೦ |
| | ಕ್ರ.ಸಂ. ೧೩೧೬ ರಿಂದ ೧೩೨೨ರ ವರೆಗಿನ ವಿಳಾಸ<br>ಶ್ರೀ ವಿವೇಕಾನಂದ ಪದವಿಪೂರ್ವ ಕಾಲೇಜು,<br>ತುರುವೇಕೆರೆ, ತುಮಕೂರು ಜಿಲ್ಲೆ. | |
| ೧೩೨೩. | ಶ್ರೀ ಆರ್. ಜಯಂತ್<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾ. | ೨,೦೦೧.೦೦ |
| ೧೩೨೪. | ಶ್ರೀ ಕೃಷ್ಣಪ್ಪ<br>ಉಪನ್ಯಾಸಕರು,<br>ಶ್ರೀ ಸಿದ್ಧಗಂಗಾ ಪ.ಪೂರ್ವ ವಿದ್ಯಾಲಯ,<br>ಹಾಲನೂರು, ತುಮಕೂರು ತಾಲ್ಲೂಕು. | ೨,೦೦೧.೦೦ |
| ೧೩೨೫. | ಶ್ರೀ ಟಿ. ಚಂದ್ರಶೇಖರಯ್ಯ<br>ಮುಖ್ಯ ಶಿಕ್ಷಕರು,<br>ನಿವೇದಿತಾ ಪ್ರೌಢಶಾಲೆ,<br>ಕ್ಯಾತಸಂದ್ರ, ತುಮಕೂರು ತಾಲ್ಲೂಕು. | ೨,೦೦೧.೦೦ |
| ೧೩೨೬. | ಶ್ರೀಮತಿ ಆರ್. ಪ್ರೇಮಲತಾ ಮತ್ತು<br>ಶ್ರೀ ಸಿ. ಬಸವರಾಜಯ್ಯ<br>ನಂ. ೯೦, ೩ನೇ ಹಂತ,<br>ವಿನಾಯಕ ಲೇ ಔಟ್, ವಿಜಯನಗರ,<br>ಬೆಂಗಳೂರು–೪೦. | ೧೦,೦೦೧.೦೦ |
| ೧೩೨೭. | ಶ್ರೀ ಸಿ.ಎಸ್. ಯೋಗಾನಂದ<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೩೨೮. | ಶ್ರೀ ಬಿ. ಶಿವಬಸಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೩೨೯. | ಶ್ರೀ ಈಶ್ವರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೩೩೦. | ಶ್ರೀ ಸಿ. ಜಯಣ್ಣ<br>ದೈಹಿಕ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೩೨೭ ರಿಂದ ೧೩೩೦ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಕಂಡಿಕೆರೆ<br>ಸಿ.ಎನ್. ಹಳ್ಳಿ, ತಾಲ್ಲೂಕು. | |
| ೧೩೩೧. | ಶ್ರೀ ಎನ್.ಬಿ. ಶಿವಕುಮಾರ್<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಆದಲಗೆರೆ, ಗುಬ್ಬಿ ತಾಲ್ಲೂಕು. | ೨,೦೦೦.೦೦ |
| ೧೩೩೨. | ಶ್ರೀ ಕೆ. ಮಂಜುನಾಥ<br>ಉಪನ್ಯಾಸಕರು | ೨,೦೦೧.೦೦ |
| ೧೩೩೪. | ಶ್ರೀ ಹೆಚ್.ಎಂ. ಕೊಟ್ಟೂರಪ್ಪ<br>ಉಪನ್ಯಾಸಕರು | ೨,೦೦೧.೦೦ |
| ೧೩೩೫. | ಶ್ರೀ ಹೆಚ್.ಎಲ್. ಶಾಂತಕುಮಾರ್<br>ಉಪನ್ಯಾಸಕರು | ೨,೦೦೧.೦೦ |
| ೧೩೩೬. | ಶ್ರೀ ಪಿ.ಎಂ. ಸೋಮಶೇಖರ್<br>ಉಪನ್ಯಾಸಕರು | ೨,೦೦೧.೦೦ |
| ೧೩೩೭. | ಶ್ರೀ ಚಿಕ್ಕಣ್ಣ<br>ಉಪನ್ಯಾಸಕರು | ೨,೦೦೧.೦೦ |
| ೧೩೩೮. | ಶ್ರೀ ಎ.ಜಿ. ಚಂದ್ರಶೇಖರಪ್ಪ<br>ಉಪನ್ಯಾಸಕರು | ೨,೦೦೧.೦೦ |
| ೧೩೩೯. | ಶ್ರೀ ಟಿ.ಹೆಚ್. ಮಾಗಡಿ ರಂಗಯ್ಯ<br>ಉಪನ್ಯಾಸಕರು | ೨,೦೦೧.೦೦ |
| | ಕ್ರ.ಸಂ. ೧೩೩೨ ರಿಂದ ೧೩೩೯ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು<br>ಜೆ.ಎಂ. ಹಳ್ಳಿ, ಮಾಗಡಿ ತಾಲ್ಲೂಕು. | |
| ೧೩೪೦. | ಶ್ರೀಮತಿ ವೀರಮ್ಮ ಚಂದ್ರಶೇಖರಯ್ಯ<br>'ಶಿವಕುಮಾರ ನಿಲಯ', ೫ನೇ ಕ್ರಾಸ್,<br>ಸಿದ್ಧಗಂಗಾ ಹೈಸ್ಕೂಲ್ ಬಡಾವಣೆ,<br>ತುಮಕೂರು–೨. | ೫,೦೦೧.೦೦ |
| ೧೩೪೧. | ಶ್ರೀ ಕುಮಾರಸ್ವಾಮಿ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಹಿರೇಹಳ್ಳಿ, ತುಮಕೂರು ತಾಲ್ಲೂಕು. | ೨,೦೦೧.೦೦ |
| ೧೩೪೨. | ಶ್ರೀ ಬಿ. ಶಿವಣ್ಣ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಹಿರೇಹಳ್ಳಿ, ತುಮಕೂರು ತಾಲ್ಲೂಕು. | ೨,೦೦೧.೦೦ |

(ಮುಂದುವರೆಯುತ್ತದೆ)





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೨೮. | ಶ್ರೀ ಕೆ.ಹೆಚ್. ಬಸವರಾಜಪ್ಪ<br>ವೃತ್ತಿ ಶಿಕ್ಷಕರು,<br>ನೆಹರು ಗ್ರಾಮಾಂತರ ಪ್ರೌಢಶಾಲೆ,<br>ಆದಿವಾಲ, ಹಿರಿಯೂರು ತಾಲ್ಲೂಕು. | ೧,೦೦೧.೦೦ |
| ೯೨೯. | ಶ್ರೀ ಶಿವಶಂಕರಣ್ಣ<br>ಸೇವಕರು,<br>ನೆಹರು ಗ್ರಾಮಾಂತರ ಪ್ರೌಢಶಾಲೆ,<br>ಆದಿವಾಲ, ಹಿರಿಯೂರು ತಾಲ್ಲೂಕು. | ೧,೦೦೧.೦೦ |
| ೯೩೦. | ಶ್ರೀ ಆರ್.ಕೆ. ಮಲ್ಲಶೆಟ್ಟಿ<br>ಸೇವಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು. | ೧,೦೦೦.೦೦ |
| ೯೩೧. | ಶ್ರೀ ಹೆಚ್.ಎಸ್. ಷಡಕ್ಷರಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರಾಕ್ಟೀಸಿಂಗ್ ಎಲಿಮೆಂಟರಿ ಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು–೨. | ೧,೦೦೧.೦೦ |
| ೯೩೨. | ಶ್ರೀ ಈ. ವಿಶ್ವೇಶ್ವರಯ್ಯ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೯೩೩. | ಶ್ರೀ ಎಸ್. ಪುಟ್ಟಯ್ಯ<br>ಪ್ರ.ಶಾ. ಸಹಾಯಕರು | ೧,೦೦೧.೦೦ |
| ೯೩೪. | ಶ್ರೀ ನರಸಿಂಹಮೂರ್ತಿ<br>ಸೇವಕ | ೧,೦೦೧.೦೦ |
| | ಕ್ರ.ಸಂ. ೮೩೨ ರಿಂದ ೮೩೪ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅರೆಯೂರು – ೫೭೨ ೧೧೮, ತುಮಕೂರು ತಾಲ್ಲೂಕು. | |
| ೯೩೫. | ಶ್ರೀಮತಿ ಬೇಬಿ ಸರೋಜ<br>ಸಹ ಶಿಕ್ಷಕರು | ೧,೦೦೦.೦೦ |
| ೯೩೬. | ಶ್ರೀ ಬಿ. ಮಹಾದೇವಪ್ಪ<br>ಸಹ ಶಿಕ್ಷಕರು | ೧,೦೦೦.೦೦ |
| ೯೩೭. | ಶ್ರೀಮತಿ ಪಿ. ಕಾಂತಮ್ಮ<br>ಸಹ ಶಿಕ್ಷಕರು | ೧,೦೦೦.೦೦ |
| | ಕ್ರ.ಸಂ. ೯೩೫ ರಿಂದ ೯೩೭ರ ವಿಳಾಸಗಳು<br>ನಿವೇದಿತಾ ಪ್ರೌಢಶಾಲೆ,<br>ಕ್ಯಾತ್ಸಂದ್ರ, ತುಮಕೂರು ತಾಲ್ಲೂಕು – ೫೭೨ ೧೦೪. | |
| ೯೩೮. | ಶ್ರೀ ಜಿ. ಗವಿಸಿದ್ದಯ್ಯ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೯೩೯. | ಶ್ರೀ ಕೆ.ಹೆಚ್. ಸೋಮಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೦. | ಶ್ರೀ ಸಿ.ಟಿ. ಸೂರಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೧. | ಶ್ರೀ ಎಸ್. ಚಂದ್ರಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೨. | ಶ್ರೀ ಎನ್. ಶಿವರಾಮಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೩. | ಶ್ರೀ ಎಂ. ವೀರಣ್ಣ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೪. | ಶ್ರೀ ಸಿ. ಸಿದ್ದಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೫. | ಶ್ರೀಮತಿ ಕೆ. ಶೀಲಾ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೬. | ಶ್ರೀ ನಂಜುಂಡಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೭. | ಶ್ರೀ ಜಿ.ಆರ್. ಶಂಕರಪ್ಪ<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೯೪೮. | ಶ್ರೀ ಎಸ್.ಆರ್. ಸದಾಶಿವಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೪೯. | ಶ್ರೀ ಕೆ. ವಿರೂಪಾಕ್ಷಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೯೫೦. | ಶ್ರೀ ಡಿ.ಎಸ್. ನಾಗರಾಜು<br>ಕನ್ನಡ ಪಂಡಿತರು | ೧,೦೦೧.೦೦ |
| ೯೫೧. | ಶ್ರೀ ಕೆ.ಎಸ್. ಚಂದ್ರಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೫೨. | ಶ್ರೀ ಪಿ. ಪ್ರಭುಸ್ವಾಮಿ<br>ಸಹ ಶಿಕ್ಷಕರು | ೧,೦೦೧.೦೦ |
| ೯೫೩. | ಶ್ರೀಮತಿ ಗಿರಿಜಾಂಬ<br>ಸಹ ಶಿಕ್ಷಕರು | ೧,೦೦೧.೦೦ |
| ೯೫೪. | ಶ್ರೀ ಚಂದ್ರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೯೩೮ ರಿಂದ ೯೫೪ರ ವಿಳಾಸಗಳು<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಉನ್ನತ ಪ್ರೌಢಶಾಲೆ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು – ೫೭೨ ೧೦೪. | |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೫೫. | ಶ್ರೀ ಎ. ಪರಮಶಿವಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೫೬. | ಶ್ರೀ ಬಿ. ರೇವಣಸಿದ್ದಪ್ಪ<br>ಕನ್ನಡ ಪಂಡಿತರು | ೧,೦೦೧.೦೦ |
| ೯೫೭. | ಶ್ರೀಮತಿ ಸೌಭಾಗ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೫೮. | ಶ್ರೀ ಡಿ.ಬಿ. ರಾಜಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೫೯. | ಶ್ರೀ ಹೆಚ್.ಎಂ. ನಾಗರಾಜಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೯೬೦. | ಶ್ರೀಮತಿ ಹೆಚ್. ಜಗದಾಂಬ<br>ಸಹ ಶಿಕ್ಷಕರು | ೧,೦೦೧.೦೦ |
| ೯೬೧. | ಎಂ. ಮಹಾದೇವಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೬೨. | ಶ್ರೀ ಕೆ.ಎಂ. ವಿಜಯಕುಮಾರ್<br>ಕನ್ನಡ ಪಂಡಿತರು | ೧,೦೦೧.೦೦ |
| ೯೬೩. | ಶ್ರೀ ಟಿ.ಎಸ್. ಪ್ರಭುದೇವ್<br>ಸಹ ಶಿಕ್ಷಕರು | ೧,೦೦೧.೦೦ |
| ೯೬೪. | ಶ್ರೀ ಆರ್.ಎನ್. ಶಾಂತಕುಮಾರ್<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೯೬೫. | ಶ್ರೀ ಜಿ. ಲೋಕೇಶಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೯೬೬. | ಶ್ರೀ ಎಸ್. ಷಡಕ್ಷರಿ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೯೬೭. | ಶ್ರೀ ಬಿ. ದೇವರಾಜು<br>ವೃತ್ತಿ ಶಿಕ್ಷಕರು | ೧,೦೦೧.೦೦ |
| ೯೬೮. | ಶ್ರೀ ಎಸ್.ಆರ್. ಬೊಮ್ಮಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೬೯. | ಶ್ರೀ ಕೆ. ದೊಡ್ಡಚಿಕ್ಕಣ್ಣ<br>ಪ್ರಥಮದರ್ಜೆ ಸಹಾಯಕರು | ೧,೦೦೧.೦೦ |
| ೯೭೦. | ಶ್ರೀ ಸಿ.ಆರ್. ಬಸವರಾಜು<br>ದ್ವಿತೀಯದರ್ಜೆ ಸಹಾಯಕರು | ೧,೦೦೧.೦೦ |
| ೯೭೧. | ಶ್ರೀ ಜಿ.ಆರ್. ಪುಟ್ಟರಾಜು<br>ದ್ವಿತೀಯದರ್ಜೆ ಸಹಾಯಕರು | ೧,೦೦೧.೦೦ |
| ೯೭೨. | ಶ್ರೀ ಪಿ. ಶಿವಶಂಕರ್<br>ದ್ವಿತೀಯದರ್ಜೆ ಸಹಾಯಕರು | ೧,೦೦೧.೦೦ |
| ೯೭೩. | ಶ್ರೀ ಕೆ.ಎಲ್. ಪ್ರಭು<br>ಪ್ರ.ಶಾ. ಸಹಾಯಕರು | ೧,೦೦೧.೦೦ |
| ೯೭೪. | ಶ್ರೀ ಎಂ.ಎನ್. ಚಂದ್ರಶೇಖರಯ್ಯ<br>ಪ್ರ.ಶಾ.ಸ. | ೧,೦೦೧.೦೦ |
| ೯೭೫. | ಶ್ರೀ ಪಿ.ಆರ್. ಸಿದ್ಧಗಂಗಯ್ಯ<br>'ಡಿ' ಗ್ರೂಫ್ ನೌಕರರು | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೭೬. | ಶ್ರೀ ಡಿ.ಎಂ. ವಿಶ್ವೇಶ್ವರಯ್ಯ<br>'ಡಿ' ಗ್ರೂಫ್ ನೌಕರರು | ೧,೦೦೧.೦೦ |
| ೯೭೭. | ಶ್ರೀ ಹೆಚ್.ಡಿ. ಕುಮಾರ್<br>'ಡಿ' ಗ್ರೂಫ್ ನೌಕರರು | ೧,೦೦೧.೦೦ |
| ೯೭೮. | ಶ್ರೀ ರೇವಣಸಿದ್ಧಯ್ಯ<br>'ಡಿ' ಗ್ರೂಫ್ ನೌಕರರು | ೧,೦೦೧.೦೦ |

ಕ್ರ.ಸಂ. ೯೫೫ ರಿಂದ ೯೭೮ರ ವಿಳಾಸಗಳು
ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಉನ್ನತ ಪ್ರೌಢಶಾಲೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು – ೫೭೨ ೧೦೪.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೭೯. | ಶ್ರೀ ಜಿ.ಹೆಚ್. ಗಂಗಾಧರಯ್ಯ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೯೮೦. | ಶ್ರೀ ಪರಮಶಿವಣ್ಣ<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೯೮೧. | ಶ್ರೀಮತಿ ಕೆಂಪಹನುಮಕ್ಕ<br>ಸಹ ಶಿಕ್ಷಕರು | ೧,೦೦೧.೦೦ |
| ೯೮೨. | ಶ್ರೀ ಎಸ್. ಬೋಜಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೮೩. | ಶ್ರೀ ಹೆಚ್. ಮೌಳೇಶಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೮೪. | ಶ್ರೀ ವಿ.ಎನ್. ಜಗದೀಶ್<br>ಸಹ ಶಿಕ್ಷಕರು | ೧,೦೦೧.೦೦ |
| ೯೮೫. | ಶ್ರೀ ಜಿ. ಪರಮೇಶ್ವರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೮೬. | ಶ್ರೀ ಜಿ. ಗಂಗಾಧರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೮೭. | ಶ್ರೀ ಎಂ. ಗಣೇಶ್<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೯೮೮. | ಶ್ರೀಮತಿ ಬಿ.ಎಸ್. ನೀಲಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೯೮೯. | ಶ್ರೀಮತಿ ಹೆಚ್.ಹೆಚ್. ಪಂಕಜಾಕ್ಷಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೯೯೦. | ಶ್ರೀಮತಿ ಡಿ. ಮಹಾಲಕ್ಷ್ಮಿದೇವಿ<br>ಸಹ ಶಿಕ್ಷಕರು | ೧,೦೦೧.೦೦ |
| ೯೯೧. | ಶ್ರೀ ಜಿ. ಕೃಷ್ಣಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೯೨. | ಶ್ರೀ ಎನ್.ವಿ. ವಿರೂಪಾಕ್ಷಯ್ಯ<br>ಸಹ ಶಿಕ್ಷಕರು | ೧,೦೦೧.೦೦ |

ಕ್ರ.ಸಂ. ೯೭೯ ರಿಂದ ೯೯೨ರ ವಿಳಾಸಗಳು
ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಹಿರಿಯ ಪ್ರಾಥಮಿಕ ಶಾಲೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು – ೫೭೨ ೧೦೪.

(ಮುಂದುವರೆಯುತ್ತದೆ)



ಕರ್ನಾಟಕ ಸರ್ಕಾರದ ಪ್ರವಾಸೋದ್ಯಮ ಇಲಾಖಾ ವತಿಯಿಂದ ಶ್ರೀಮಠದಲ್ಲಿ ನೂತನವಾಗಿ ನಿರ್ಮಿಸಲಿರುವ 'ಯಾತ್ರಿ ನಿವಾಸ' ಕಟ್ಟಡ ಶಿಲಾನ್ಯಾಸ ಸಮಾರಂಭವನ್ನು ಜೂನ್ ೧ರಂದು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಪ್ರವಾಸೋದ್ಯಮ ಇಲಾಖೆಯ ಆಯುಕ್ತರಾದ ಶ್ರೀ ಮಹೇಂದ್ರ ಜೈನ್ ಅವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವೆ ಇಲಾಖೆಯ ಕಾರ್ಯದರ್ಶಿಗಳಾದ ಡಾ. ಸಿ.ಎಸ್. ಕೇದಾರ್, ತುಮಕೂರು ಜಿಲ್ಲಾಧಿಕಾರಿ ಶ್ರೀ ಮಲ್ಲಿಕಾರ್ಜುನ ಬಿ. ದ್ಯಾಬೇರಿ ಹಾಗೂ ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾರಿ ಶ್ರೀ ಅಮರನಾರಾಯಣ ಅವರು ಉಪಸ್ಥಿತರಿದ್ದರು.



ತುಮಕೂರಿನಲ್ಲಿ ಇತ್ತೀಚೆಗೆ ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜಿನ ಹೊಸ ವಿಸ್ತರಣಾ ಕಟ್ಟಡದ ಉದ್ಘಾಟನೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪ್ರಾಂಶುಪಾಲರಾದ ಶ್ರೀ ಆರ್.ಎ. ಪೀರ್‌ಸಾಬ್ ಗೋಲ್ ಮೊದಲಾದವರು ಉಪಸ್ಥಿತರಿದ್ದರು.